# ಚಿಂಚೋಳಿ ತಾಲೂಕಿನ ದೇವಸ್ಥಾನಗಳ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್ ನಿಬಂಧ)

ಸಂಶೋಧಕಿ

ಶರಣಮ್ಮ ತಂದೆ ಬಕ್ಕಪ್ಪ



ಮಾರ್ಗದರ್ಶಕರು

ಡಾ. ಚಿತ್ರಕಳಾ ಜೆ. ಮಠಪತಿ

ಕನ್ನಡ ಸಹಪ್ರಾಧ್ಯಾಪಕರು

ವಿಜ್ಞಾನೇಶ್ವರ ಸರಕಾರಿ ಕಾನೂನು ಕಾಲೇಜು

ಮರತೂರ ಕಲಬುರಗಿ.




ಭಾಷಾನಿಕಾಯ

ಕನ್ನಡ ಸಾಹಿತ್ಯ ಅಧ್ಯಾಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

ಮಾನ್ಯತಾ ಕೇಂದ್ರ : ಡಾ. ಬಿ.ಡಿ ಜತ್ತಿ ವಚನ ಮತ್ತು ಸಂಶೋಧನಾ ಕೇಂದ್ರ, ಕಲಬುರಗಿ

೨೦೧೭-೧೮

# ಚಿಂಚೋಳಿ ತಾಲೂಕಿನ ದೇವಸ್ಥಾನಗಳ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್ ನಿಬಂಧ)


ಸಂಶೋಧಕಿ

**ಶರಣಮ್ಮ ತಂದೆ ಬಕ್ಕಪ್ಪ**

ಮಾರ್ಗದರ್ಶಕರು

**ಡಾ. ಚಿತ್ಕಳಾ ಜೆ. ಮಠಪತಿ**

ಕನ್ನಡ ಸಹಪ್ರಾಧ್ಯಾಪಕರು

ವಿಜ್ಞಾನೇಶ್ವರ ಸರಕಾರಿ ಕಾನೂನು ಕಾಲೇಜು

ಮರತೂರ ಕಲಬುರಗಿ.








ಭಾಷಾನಿಕಾಯ

ಕನ್ನಡ ಸಾಹಿತ್ಯ ಅಧ್ಯಾಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

ಮಾನ್ಯತಾ ಕೇಂದ್ರ : ಡಾ. ಬಿ.ಡಿ ಜತ್ತಿ ವಚನ ಮತ್ತು ಸಂಶೋಧನಾ ಕೇಂದ್ರ, ಕಲಬುರಗಿ


೨೦೧೭-೧೮

## ಮಾರ್ಗದರ್ಶಕರ ದೃಢೀಕರಣ ಪತ್ರ

**ಚಿಂಚೋಳಿ ತಾಲೂಕಿನ ದೇವಸ್ಥಾನಗಳ ಸಾಂಸ್ಕೃತಿಕ ಅಧ್ಯಯನ** ಎಂಬ ವಿಷಯವುಳ್ಳ ಸಂಶೋಧನಾ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ **ಶರಣಮ್ಮ ತಂದೆ ಬಕ್ಕಪ್ಪ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 31-08-2018

ಸ್ಥಳ : ಕಲಬುರಗಿ

ಮಾರ್ಗದರ್ಶಕರು

**ಡಾ. ಚಿತ್ಕಳಾ ಜೆ. ಮಠಪತಿ**

ಕನ್ನಡ ಸಹಪ್ರಾಧ್ಯಾಪಕರು

ವಿಜ್ಞಾನೇಶ್ವರ ಸರಕಾರಿ ಕಾನೂನು ಕಾಲೇಜು

ಮರತೂರ ಕಲಬುರಗಿ.

## ಸಂಶೋಧಕಿಯ ಪ್ರಮಾಣ ಪತ್ರ

**ಚಿಂಚೋಳಿ ತಾಲೂಕಿನ ದೇವಸ್ಥಾನಗಳ ಸಾಂಸ್ಕೃತಿಕ ಅಧ್ಯಯನ** ಎಂಬ ನಿಬಂಧವನ್ನು **ಡಾ. ಚಿತ್ಕಳಾ ಜೆ. ಮಠಪತಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಮಾನ್ಯತಾ ಕೇಂದ್ರ, ಡಾ. ಬಿ.ಡಿ. ಜತ್ತಿ ವಚನ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಕಲಬುರಗಿಯಿಂದ ಭಾಷಾನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 31-08-2018

ಸ್ಥಳ : ಕಲಬುರಗಿ

**ಸಂಶೋಧನಾ ವಿದ್ಯಾರ್ಥಿನಿ**

**ಶರಣಮ್ಮ ತಂದೆ ಬಕ್ಕಪ್ಪ**

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಡಾ. ಬಿ.ಡಿ. ಜತ್ತಿ ವಚನ ಅಧ್ಯಯನ ಮತ್ತು
ಸಂಶೋಧನ ಕೇಂದ್ರ ಕಲಬುರಗಿ

# ಚಿಂಚೋಳಿ ತಾಲೂಕಿನ ದೇವಸ್ಥಾನಗಳ ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ

# ಅಧ್ಯಾಯ-೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಪ್ರಸ್ತಾವನೆ

'ಇತಿಹಾಸ' ಎಂದರೆ ಕೇವಲ ರಾಜ ಮಹಾರಾಜರ ಚರಿತ್ರೆ ಹಾಗೂ ಯುದ್ಧಗಳ ದಾಖಲೆ ಎಂದು ತಿಳಿದುಕೊಳ್ಳಲಾಗಿತ್ತು. ಆದರೆ ಇಂದು ಇತಿಹಾಸದ ಅರ್ಥವ್ಯಾಪ್ತಿಯು ಪ್ರಾಗೈತಿಹಾಸಿಕ ಕಾಲದಿಂದ ಹಿಡಿದು ರಾಜ ಮಹಾರಾಜರ ರಾಜ್ಯಭಾರದವರೆಗೆ ಹಾಗೂ ಜನ ಸಾಮಾನ್ಯರ ಬದುಕಿನ ಅಂಶಗಳನ್ನೊಳಗೊಂಡ ವಿಶಿಷ್ಟ ಅಧ್ಯಯನವಾಗಿ ವಿಸ್ತುತಗೊಂಡಿದೆ. ಇತಿಹಾಸ ಒಂದು ರೀತಿಯಲ್ಲಿ ಜನಸಾಮಾನ್ಯರ ಸಾಂಸ್ಕೃತಿಕ ಚರಿತ್ರೆಯನ್ನು ತಿಳಿದುಕೊಳ್ಳಲು ಸಹಕಾರಿಯಾಗಿದೆ.

ಇಂತಹ ಒಂದು ಉಜ್ವಲವಾದ ಇತಿಹಾಸವನ್ನು ಹೊಂದಿದ ಭಾರತದಲ್ಲಿ ಕರ್ನಾಟಕಕ್ಕೆ ತನ್ನದೇ ಆದ ಮಹತ್ವವಿದೆ. ಇತಿಹಾಸದ ಪುಟಗಳನ್ನು ತಿರುವಿ ಹಾಕುತ್ತಾ ಹೋದರೆ ಇಲ್ಲಿಯ ರಮ್ಯ ಇತಿಹಾಸವು ನಮಗೆ ತಿಳಿದು ಬರುತ್ತದೆ. ಉನ್ನತವಾದ ಸಂಸ್ಕೃತಿಯನ್ನು ಹೊಂದಿದ ಕಲಬುರಗಿ ಜಿಲ್ಲೆಯು ಕರ್ನಾಟಕದ ಉತ್ತರ ಭಾಗದಲ್ಲಿದ್ದು ೧೯೫೬ರಲ್ಲಿ ಪುನರ್ವಿಂಗಡನೆಯಾದಾಗ ಹೈದ್ರಾಬಾದ ಕರ್ನಾಟಕದ ಪ್ರದೇಶದಿಂದ ಅಂದಿನ ಮೈಸೂರು ರಾಜ್ಯಕ್ಕೆ ಸೇರಿದ ಮೂರು ಜಿಲ್ಲೆಗಳಲ್ಲಿ ಒಂದಾಗಿದೆ. ಕಲಬುರಗಿ ಜಿಲ್ಲೆಯ ಸಮತಟ್ಟಾದ ಪ್ರದೇಶವು ೭೬°,೦೪ ಮತ್ತು ೭೭°,೪೨ ಪೂರ್ವ ರೇಖಾಂಶ ಹಾಗೂ ೧೬°,೧೨ ಮತ್ತು ೧೭°,೪೬ ಉತ್ತರ ಅಕ್ಷಾಂಶ ಇವುಗಳ ನಡುವೆ ಹರಡಿಕೊಂಡಿದೆ. ಜಿಲ್ಲೆಯ ವಾಯುವ್ಯ ಭಾಗದಲ್ಲಿ ಮಹಾರಾಷ್ಟ್ರ ರಾಜ್ಯದ ಸೋಲಾಪುರ ಮತ್ತು ಉಸ್ಮಾನಬಾದ ಜಿಲ್ಲೆಗಳ ಎಲ್ಲೆಯನ್ನು ಮತ್ತು ಮೆಹಬೂಬ್ ನಗರ ಜಿಲ್ಲೆಗಳ ಗಡಿಯನ್ನು ಪಡೆದಿದೆ. ಉತ್ತರದಲ್ಲಿ ಬೀದರ ಜಿಲ್ಲೆ, ದಕ್ಷಿಣದಲ್ಲಿ ರಾಯಚೂರ ಜಿಲ್ಲೆಯಿದೆ ಮತ್ತು ಪಶ್ಚಿಮದಲ್ಲಿ ಬಿಜಾಪುರ ಜಿಲ್ಲೆಯಿಂದ ಸುತ್ತುವರಿಯಲ್ಪಟ್ಟಿದೆ.

ನಮ್ಮ ಪ್ರಾಚೀನ ಕರ್ನಾಟಕದ ಚರಿತ್ರೆಯನ್ನು ಒಮ್ಮೆ ಅವಲೋಕಿಸಿದಾಗ ಹೈದ್ರಾಬಾದ ಕರ್ನಾಟಕದಲ್ಲಿರುವ ಸೇಡಂ, ಜೇವರ್ಗಿ, ಅಫಜಲಪುರ, ಆಳಂದ, ಚಿತ್ತಾಪುರ, ಕಲಬುರಗಿ, ಚಿಂಚೋಳಿ ಪ್ರದೇಶವು ಶಿಲಾಯುಗದ ಕುರುಹುಗಳಾಗಿವೆ. ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ವಿಜಯನಗರದ ಅರಸರು, ಬಹಮನಿ ಸುಲ್ತಾನರು ಮತ್ತು ನಿಜಾಮರು ಹೈದ್ರಾಬಾದ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಕೊಡುಗೆ ಸಲ್ಲಿಸಿದ್ದಾರೆ, ಕೃಷ್ಣಾ, ಭೀಮಾ, ಕಾಗಿಣಾ, ಕಾರಂಜಾ, ಬೆಣ್ಣೆತೊರೆ, ತುಂಗಭದ್ರಾ ಮುಂತಾದ ನದಿಗಳು ಮತ್ತು ನೈಸರ್ಗಿಕ ಸಂಪನ್ಮೂಲಗಳು ಇಲ್ಲಿನ ಇತಿಹಾಸವನ್ನು ಶ್ರೀಮಂತಗೊಳಿಸಿವೆ.

ಚಿಂಚೋಳಿ ತಾಲೂಕು ಕೇಂದ್ರವಾಗಿದ್ದು, ಕಲಬುರಗಿಯಿಂದ ಈಶಾನ್ಯಕ್ಕೆ ೭೦ ಕಿ.ಮೀ ಬೆಂಗಳೂರಿನಿಂದ ಉತ್ತರಕ್ಕೆ ಸುಮಾರು ೫೭೧ ಕಿ.ಮೀ ದೂರದಲ್ಲಿದೆ. ಭೀಮಾನದಿಯ ಉಪನದಿ ಕಾಗಿಣಾದ ಉಪನದಿಯಾದ ಮುಲ್ಲಾಮಾರಿ ಎಡದಂಡೆಯ ಮೇಲಿರುವ ಚಾರಿತ್ರಿಕ ಮಹತ್ವದ ಸ್ಥಳ ಚಿಂಚೋಳಿಯಾಗಿದೆ. ಸುಕ್ಷೇತ್ರ ಬುಗ್ಗಿ, ಚಂದ್ರಂಪಳ್ಳಿ ಜಲಾಶಯ

ನೈಸರ್ಗಿಕವಾದಂತಹ ಪ್ರವಾಸಿ ತಾಣಗಳಾಗಿವೆ. ಸುಲೆಪೇಟ್ ನಗರವು ಕಲ್ಯಾಣ ಚಾಳುಕ್ಯರ ಕಾಲದಿಂದಲೂ ವ್ಯಾಪಾರ ಕೇಂದ್ರವಾಗಿತ್ತು. ಅಲ್ಲದೇ ದೇಗುಲಮಡಿಯ ವೀಳ್ಯದೆಲೆಯು ವ್ಯಾಪಾರಕ್ಕೆ ಪ್ರಸಿದ್ಧಗೊಂಡಿದ್ದು, ವೀಳ್ಯದೆಲೆಗಳನ್ನು ಇಲ್ಲಿಂದ ರಫ್ತು ಮಾಡಲಾಗುತ್ತಿತ್ತು. ಮೊಘಾ ಪ್ರದೇಶವು ರಾಮಲಿಂಗೇಶ್ವರ ದೇವಾಲಯಕ್ಕೆ ಪ್ರಸಿದ್ಧವಾಗಿದೆ. ಈ ಪ್ರದೇಶವು ಹಾರಕೂಡ ಹಿರೇಮಠದ ಪವಾಡಪುರುಷ ಲಿಂಗೈಕ್ಯ ಚನ್ನಬಸವ ಶಿವಾಚಾರ್ಯರ ಜನ್ಮಭೂಮಿಯಾಗಿದೆ. ಚಿಂಚೋಳಿಯಿಂದ ೩ ಕಿ.ಮೀ ದೂರದಲ್ಲಿರುವ ಐನೊಳ್ಳಿಯು ಶ್ರೇಷ್ಠ ವಿದ್ವಾಂಸರಾಗಿದ್ದ ಕರಿಬಸವ ಶಾಸ್ತ್ರಿಗಳ ಪುಣ್ಯ ಭೂಮಿಯಾಗಿದೆ ಇವರ ಸಮಾಧಿಯು ಚಿಂಚೋಳಿಯಲ್ಲಿದೆ.

ನಿಡಗುಂದ, ಮೊಘಾ, ಗಡಿಕೇಶ್ವರ, ಮುಂತಾದ ಪ್ರದೇಶಗಳು ಐತಿಹಾಸಿಕ ದೇವಾಲಯಗಳಿಗೆ ಪ್ರಸಿದ್ಧಗೊಂಡಿದೆ. ಈ ಪ್ರದೇಶವು ಹಿಂದೂ, ಮುಸ್ಲಿಂ, ಬೌದ್ಧ, ಜೈನ, ಕ್ರೈಸ್ತ, ವೈಷ್ಣವ, ವೀರಶೈವ ಧರ್ಮಗಳ ಸಂಗಮವಾಗಿದೆ. ಹೈದ್ರಾಬಾದ ಕರ್ನಾಟಕ ಪ್ರದೇಶವು ಬಸವಣ್ಣ, ಅಲ್ಲಮ ಪ್ರಭು ಮತ್ತು ಇತರ ವಚನಕಾರರ ಸಾಹಿತ್ಯದ, ದಾಸ ಸಾಹಿತ್ಯದ ಮತ್ತು ಸೂಫಿ ಧರ್ಮದ ಕಣಜವಾಗಿದೆ.

ಚಿಂಚೋಳಿ ತಾಲ್ಲೂಕು ಲಂಬಾಣಿ ಜನಾಂಗದ ತಾಲೂಕಿನ ಚೇಂಗಟಾದಲ್ಲಿರುವ ವಾಡಾ ಹಜರತ ಸೈಯದ ಮಸ್ತಾನ ಶಹಾ ಖಾದ್ರಿ ಯವರ ದರ್ಗಾ ಮತ್ತು ಸೊಮೇಶ್ವರ ದೇವಾಲಯವು ಹಿಂದೂ ಮುಸ್ಲಿಂ ಭಾವ್ಯಕ್ಯತೆಯ ಪ್ರದೇಶವೆನಿಸಿದೆ. ನಿಸರ್ಗ ರಮಣೀಯ ತೆಲಂಗಾಣ-ಕರ್ನಾಟಕ ಗಡಿಯಲ್ಲಿ ಗೊಟ್ಟಂ ಗೊಟ್ಟಿ ಅರಣ್ಯವು ಒಂದು ಅದ್ಭುತ ಪ್ರದೇಶವಾಗಿದೆ. ಈ ಪ್ರದೇಶವು ಪ್ರವಾಸಿಗರನ್ನು ಆಕರ್ಷಿತಗೊಳಿಸಿದೆ. ಕರ್ನಾಟಕ ಸರ್ಕಾರದ ಯೋಜನೆಗೆ ಒಳಗಾದಂತಹ ಈ ಪ್ರದೇಶವು ಐತಿಹಾಸಿಕ ಮತ್ತು ಸಾಂಸ್ಕೃತಿಕ ಕಾರ್ಯ ಕ್ರಮಗಳಿಗೆ ಸುಂದರ ತಾಣವಾಗಿದೆ ಎಂದು ಹೇಳಬಹುದು.

ಒಂದು ನಾಡಿನ ಇತಿಹಾಸ ಮತ್ತು ಸಾಂಸ್ಕೃತಿಕ ಕಲೆಯನ್ನು ಆ ನಾಡನ್ನು ಕಾಲದಿಂದ ಕಾಲಕ್ಕೆ ಆಳಿದ ರಾಜ ಮಹಾರಾಜರ ಇತಿಹಾಸದಿಂದ ಅರಿತುಕೊಳ್ಳಬಹುದಾಗಿದೆ. ಇತಿಹಾಸವನ್ನು ಚಿತ್ರಿಸುವ ಗ್ರಂಥಗಳಲ್ಲಿ ರಾಜಕೀಯ ಇತಿಹಾಸವೇ ಪ್ರಧಾನವಾಗಿದ್ದರೂ ಗ್ರಂಥದ ಕೊನೆಯಲ್ಲಿ ಆ ನಾಡಿನ ಕಲೆ ಧರ್ಮ ಸಾಂಸ್ಕೃತಿಕ ಚಟುವಟಿಕೆ ಇತ್ಯಾದಿಗಳನ್ನು ಕುರಿತು ನಿರೂಪಿಸುವ ಒಂದೆರಡು ಅಧ್ಯಾಯಗಳು ದೊರೆಯುತ್ತವೆ.

ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಅಲ್ಲ. ಅಲ್ಲಿ ಬದುಕಿದ ಜನಜೀವನದ ಗಣನೀಯವಾದ ಭಾಗ. ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಸಾಂಸ್ಕೃತಿಕ ಚಟುವಟಿಕೆ ಅವರ ಜನ ಜೀವನಕ್ಕೆ ಎದುರಾದ ಸಮಸ್ಯೆಗಳು,ಅವರು ಬಾಳಿದ ಜೀವನ ಮೌಲ್ಯಗಳು ಇತ್ಯಾದಿಗಳುಳ್ಳ ವಿವರಣೆಯೇ ಆ ದೇಶದ ನಡೆ ನುಡಿಯ ಇತಿಹಾಸ.

ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಮಾಜಿಕ ಅಧ್ಯಯನವೆಂದೂ ಸಾಂಸ್ಕೃತಿಕ ಅಧ್ಯಯನವೆಂತಲೂ ಕರೆಯಬಹುದು. ಸಾಂಸ್ಕೃತಿಕ ಅಧ್ಯಯನವೆನ್ನುವ ಯುಕ್ತಿಯೇ ಹೆಚ್ಚು ಉಚಿತವಾದುದು.

## ೧.೧ ಅಧ್ಯಯನದ ಉದ್ದೇಶ :

ಚಿಂಚೋಳಿ ನೈಸರ್ಗಿಕವಾದ ಪ್ರದೇಶ, ಐತಿಹಾಸಿಕ ಸಂಸ್ಕೃತಿಯ ಕ್ಷೇತ್ರವೂ ಆಗಿದೆ. ಚಿಂಚೋಳಿಯನ್ನು ದೇವಾಲಯಗಳ ಪುಣ್ಯ ಕ್ಷೇತ್ರವೆಂದೂ ಗುರುತಿಸಿರುತ್ತಾರೆ. ಈ ವಿಷಯಕ್ಕೆ ತಾಲೂಕಿನ ಜನ ಸಾಮಾನ್ಯರ ತಿಳುವಳಿಕೆಯೂ ತೀರಾ ಕಡಿಮೆಯಿದೆ. ಈ ತಾಲೂಕಿನ ದೇವಾಲಯಗಳು ನಿರ್ಲಕ್ಷಿಸಲ್ಪಟ್ಟಿವೆ. ಹಾಳಾದ ಮಂದಿರಗಳು ಭಗ್ನಗೊಂಡ ದೇವಾಲಯಗಳು ಅದೆಷ್ಟು ರುಂಡವಿಲ್ಲದ ಮುಂಡ ಶಿಲ್ಪಗಳು, ಕೈಕಾಲುಗಳಿಲ್ಲದ ದಿಂಡುಗಳು 'ಹಾಂ ಇಲ್ಲಿ ಹೆಜ್ಜೆ ಇಡಬೇಡ ನೋವಾಗುತ್ತದೆ" (ಪ್ರಜಾವಾಣಿ ಪೇಪರ) ಎಂಬ ನರಳಿಕೆ ಹೊರಹೊಮ್ಮಿ ಬಂದಂತಾಗುತ್ತದೆ. ಚಿಂಚೋಳಿ ತಾಲೂಕಿನಿಂದ ಸಾಕಷ್ಟು ಕಿ.ಮೀ ದೂರದಲ್ಲಿ ಊರಾಚೆಯಲ್ಲಿ ಅದೆಷ್ಟು ದೇವಾಲಯಗಳು ಶಿಥಿಲಾವಸ್ಥೆಯಲ್ಲಿರುವುದು ಕಂಡುಬರುತ್ತದೆ. ರಸ್ತೆ ವ್ಯವಸ್ಥೆಯಿಲ್ಲದೆ ಹಾಳಾಗಿರುವಂತಹ ಈ ದೇವಾಲಯಗಳಿಗೆ ಸಂದರ್ಶಿಸಿದರೆ ಕರುಳು ಮಿಡಿಯುತ್ತದೆ. ಹಾಳಾದಂತಹ ಪುಷ್ಕರಣಿಗಳು, ದೇವಾಲಯ ಮಂಟಪಗಳು, ಶಿಲಾ ಶಾಸನಗಳು, ' ಇಲ್ಲಿ ಬನ್ನಿ ಇದು ಪ್ರಾಚೀನ ಐತಿಹಾಸಿಕ ಪುಣ್ಯಕ್ಷೇತ್ರಗಳ ತಾಣ ಇವುಗಳಿಗೆ ಜೀವ ತುಂಬ ಬನ್ನಿ, ಇಲ್ಲಿ ಸಾಂಸ್ಕೃತಿಕ ಚಟುವಟಿಕೆ ರಚಿಸಿ ಬನ್ನಿ" ಎಂದು ಕೈ ಮಾಡಿ ಕರೆಯುವಂತೆ ನಮಗೆ ಭಾಸವಾಗುತ್ತದೆ.

ಚಿಂಚೋಳಿ ತಾಲೂಕು ಪ್ರಾಗೈತಿಹಾಸಿಕ ಕಾಲದಿಂದಲೂ ತನ್ನ ಪ್ರಾಮುಖ್ಯತೆ ಪಡೆದುಕೊಂಡಿದೆ. ಇತಿಹಾಸಕಾಲಕ್ಕೆ ಬಂದಾಗ ಪ್ರಾರಂಭಿಕ ಅರಸು ಮನೆತನಗಳ ಚರಿತ್ರೆಯನ್ನು ಅದರ ಐತಿಹ್ಯಗಳನ್ನು ಹೇಳುವ ಶಾಸನಗಳು, ಅಳಿದುಳಿದ ಸ್ಮಾರಕಗಳು ಇಲ್ಲಿ ದೊರೆತ ಐತಿಹಾಸಿಕ ಅವಶೇಷಗಳನ್ನು ಪುನರ್ ವಿಮರ್ಶಿಸಿ ಮರು ಅಧ್ಯಯನ ಮಾಡುವುದು. ಜೊತೆಗೆ ಕರ್ನಾಟಕದ ಸಂಸ್ಕೃತಿಯ ಅಭಿವೃದ್ದಿಗೆ ಈ ಪ್ರದೇಶದ ಅರಸರು ಹಿರಿದಾದ ಕೊಡುಗೆ ನೀಡಿದ್ದಾರೆ. ಈ ನಿಟ್ಟಿನಲ್ಲಿ ಇಲ್ಲಿನ ಅರಸರು ಧಾರ್ಮಿಕ, ಸಾಮಾಜಿಕ, ರಾಜಕೀಯ, ಸಾಹಿತ್ಯ, ಸಾಂಸ್ಕೃತಿಕ ಮತ್ತು ಚಿತ್ರಕಲೆಗಳಿಗೆ' ಮಹತ್ವದ ಕೊಡುಗೆ ನೀಡಿದ್ದಾರೆ. ಅದು ಬಹಳ ಅಮೂಲ್ಯವಾದ ಸಂಪತ್ತು. ಈ ಅಮೂಲ್ಯವಾದ ಸಂಪತನ್ನು ತಿಳಿಯುವುದು ಮತ್ತು ತಿಳಿಸುವುದು ಪ್ರಸ್ತುತ ಸಮಯದಲ್ಲಿ ತೀರಾ ಅಗತ್ಯ ಮತ್ತು ಅವಶ್ಯಕವಾಗಿದೆ.

ಚಿಂಚೋಳಿ, ಚೇಂಗಟಾ, ಶಿರವಾಳ, ದೇಗಲಮಡಿ, ಕರಕಮುಕ್ಲಿ, ಮೊಘಾ, ಸುಲೇಪೇಟ, ರೇವಗ್ಗಿ ಮಿರ್‍ಯಾಣ ಈ ಗ್ರಾಮಗಳು ಆಗ ತುಂಬ ಹೆಸರು ವಾಸಿಯಾಗಿದ್ದವು. ರಾಷ್ಟ್ರಕೂಟರ ರಾಜ್ಯದ ಸ್ಥಳೀಯ ಸ್ಥಾನಗಳ ಮಹತ್ವದಬಗ್ಗೆ ಮರು ಅಧ್ಯಯನ ಮಾಡುವುದಾಗಿದೆ. ದೇವಾಲಯಗಳು ಸಾರ್ವಜನಿಕರ ಆಸ್ತಿಯಾಗಿರುತ್ತದೆ.

೧. ಒಟ್ಟಾರೆಯಾಗಿ ನಮ್ಮ ಜನಾಂಗಕ್ಕೆ ಸ್ಥಳಿಯ ಇತಿಹಾಸದ ಬಗ್ಗೆ ತಿಳಿಸುವುದು.
೨. ಅವರು ರೂಪಿಸಿದ ಸಾಂಸ್ಕೃತಿಕ ಚಟುವಟಿಕೆ ಪರಂಪರೆಯನ್ನು ರೂಢಿಯಲ್ಲಿ ಉಳಿಸಿ ಬೆಳೆಸಿಕೊಂಡು ಬರುವುದು.
೩. ಚಿಂಚೋಳಿ ತಾಲೂಕಿನ ಇತಿಹಾಸ ತಿಳಿಸಿ ನಮ್ಮ ಯುವಕರಲ್ಲಿ ಸ್ಫೂರ್ತಿ ನವ ಚೈತನ್ಯವನ್ನು ತುಂಬಿ ಎಲ್ಲಾ ಕಾರ್ಯಗಳಿಗೆ ಧೈರ್ಯ ತುಂಬಿಸುವುದು.
೪. ಇತಿಹಾಸದ ಐತಿಹ್ಯ ಕಾಪಾಡಿ ಅವುಗಳಿಗೆ ಜೀವ ತುಂಬುವಂತಹ ಪ್ರಯತ್ನ ಮಾಡುವುದು.

೫. ದೇವಾಲಯಕ್ಕೆ ಪ್ರವೇಶಿಸುವವರು ಮಾನವರೆಲ್ಲರು ಒಂದೇ ,ಸಮಾನರು ಅವರಲ್ಲಿ ಯಾವುದೇ ಭೇದಬಾವವಿಲ್ಲವೆಂದು ಜನರಲ್ಲಿ ಅರಿವು ಮೂಡಿಸುವುದು.

"ಹಳೆಯ ಕೋಟೆ ದೇಗುಲಗಳ ಕುರಿತಾದ ಕಡತ ಅರಹುವವು ಇಲ್ಲಿಯ ದೇಗುಲದ ಶಿಲ್ಪಮೂರ್ತಿ ಸಾರುವುದು ಪೂರ್ವಜನರ ಪ್ರತಿಭೆಯ ಕೀರ್ತಿ, ಪುರಾತನ ಮಂದಿರ, ಮಠಗುಡಿ ಇದು ನಮ್ಮ ಭವ್ಯ ಪರಂಪರೆಯ ಪ್ರತೀಕವಾಗಿವೆ. ಕೋಟೆ ಕೊತ್ತಲ ಗುಡಿ ಗೋಪುರಗಳು ಪ್ರಾಚಿನ ಕಾಲದ ಸಾಂಸ್ಕೃತಿಕ ಪರಂಪರೆಯ ದ್ಯೋತ್ಯಕವೆನಿಸಿದೆ. ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಚಿಂಚೋಳಿ ತಾಲೂಕಿನ ನಿಡಗುಂದ, ಸುಲೇಪೇಟ, ಪುಲತೋಟ, ಮೊಘ, ಮಿರ್‍ಯಾಣ, ಚೇಂಗಟಾ, ದೇಗಲಮಡಿ, ಹಾರಕೂಡ, ಕೋಡ್ಲಿ, ಚಿಂಚೋಳಿ, ಚಂದ್ರಂಪಳ್ಳಿ, ಗಡಿಕೇಶ್ವರ, ರೇವಗ್ಗಿ, ರಾಮತೀರ್ಥ, ರುಮ್ಮನಗೂಡು, ಕೆರಳ್ಳಿ, ಭೂತಪೂರ, ಪಸ್ತಪುರ ಮುಂತಾದ ಸುತ್ತಮುತ್ತಲಿನ ಪ್ರದೇಶಗಳನ್ನು ಸೇರಿಸಿಕೊಳ್ಳಲಾಗಿದೆ.

ವ್ಯಾಪ್ತಿ-ಕಾಲದ ದೃಷ್ಟಿಯಿಂದ ಈ ಸಂಶೋಧನಾ ಅಧ್ಯಯನವು ಕ್ರಿ.ಶ 8ನೇ ಶತಮಾನದಿಂದ 15ನೇ ಶತಮಾನದವರೆಗೆ ರಚನೆಯಾದ ದೇವಾಲಯಗಳನ್ನು ಕುರಿತಾಗಿ ಒಳಗೊಂಡಿದೆ. ಈ ಅಧ್ಯಯನದ ವ್ಯಾಪ್ತಿಯು ಚಿಂಚೋಳಿಯೊಂದಿಗೆ ಕಲಬುರಗಿ ಜಿಲ್ಲೆಯ ಚಿತ್ತಾಪುರ, ಸೇಡಂ, ಜೇವರ್ಗಿ, ಕಲಬುರಗಿ ತಾಲೂಕು ಮಳಖೇಡ ಸುತ್ತಮುತ್ತಲಿನ ಪ್ರದೇಶಗಳನ್ನು ಒಳಗೊಂಡಿದೆ.

## ೧.೨ ಅಧ್ಯಯನದ ವಿಧಾನ:

ಈ ಸಂಶೋಧನಾ ಅಧ್ಯಯನಕ್ಕೆ ಸಮಾಜ ವಿಜ್ಞಾನ ಶಿಸ್ತುಗಳಲ್ಲಿ ವಾಡಿಕೆಯಲ್ಲಿರುವ ಸಂಶೋಧನಾ ವಿಧಾನಗಳನ್ನು ಇಲ್ಲಿ ಬಳಸಲಾಗಿದೆ. ಸಂಶೋಧನೆಗೆ ಅಗತ್ಯವಾದ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ಪತ್ರಿಕೆಗಳಲ್ಲಿ ಪ್ರಕಟವಾದ ದೇವಸ್ಥಾನಗಳ ಮಾಹಿತಿ ಹಾಗೂ ಚಿಂಚೋಳಿ ತಾಲೂಕಿನ ದೇವಾಲಯಗಳ ಅಧ್ಯಯನದ' ಸಂಶೋಧನೆಯ ಪುಸ್ತಕಗಳು, ಗ್ರಂಥಾಲಯಗಳು ಹಾಗೂ ನನ್ನ ಕ್ಷೇತ್ರ ಕಾರ್ಯಗಳಿಂದ ಊರಲ್ಲಿ ಇರುವ ಪ್ರಮುಖ ಹಿರಯರ ಮಾರ್ಗದರ್ಶಕ ನುಡಿಗಳಿಂದ ಈ ಎಲ್ಲಾ ಮಾಹಿತಿಯನ್ನು ನಾನು ಸಂಗ್ರಹಿಸಿಕೊಂಡಿದ್ದೇನೆ.

ಸಂಶೋಧನಾ ಅಧ್ಯಾಯನದಲ್ಲಿ ಚಿಂಚೋಳಿಗೆ ಸಂಬಂಧಿಸಿದ ಮಾಹಿತಿಯನ್ನು ಸ್ವತಹ ನಾನೇ ಕ್ಷೇತ್ರ ಕಾರ್ಯವನ್ನು ಕೈಗೊಂಡು ಸಂಗ್ರಹಿಸಿದ್ದೇನೆ. ಸ್ಥಳೀಯರಿಂದ ಮಾಹಿತಿ ಪಡೆದುಕೊಂಡಿರುತ್ತೇನೆ. ನನ್ನ 5 ತಿಂಗಳ ಕುಡಿಯನ್ನು ಹಿಂದಿಟ್ಟುಕೊಂಡು ನನ್ನ ಗಂಡ ಹಾಗೂ ನನ್ನ ತಾಯಿಯ ಸಹಾಯದಿಂದ ನನ್ನ ಕ್ಷೇತ್ರಕಾರ್ಯ ಬಿರು ಬಿಸಿಲಿನಲ್ಲಿ ಮುಗಿಸಿಕೊಂಡು ಬಂದಿದ್ದೇನೆ. ಇದಕ್ಕೆ ಪ್ರೋತ್ಸಾಹ ನೀಡಿದವರು ನನ್ನ ಪ್ರೀತಿಯ ಮಾವನವರಾದ ಶ್ರೀ. ಮಲ್ಲಿಕಾರ್ಜುನ. ಎಮ್. ಬೋನಾಳ ಇವರಿಗೆ ನನ್ನ ಕೃತಜ್ಞತೆಗಳು.

## ೧.೩ ಅಧ್ಯಯನದ ವ್ಯಾಪ್ತಿ:

ಹೈದ್ರಾಬಾದ ಕರ್ನಾಟಕದ ಹಿಂದುಳಿದ ವಿಭಾಗಗಳಲ್ಲೊಂದಾದ ಕಲಬುರಗಿ ವಿಭಾಗದ ತಾಲೂಕಾದ ಚಿಂಚೋಳಿಯನ್ನು ಕೇಂದ್ರವಾಗಿಸಿಕೊಳ್ಳಲಾಗಿದೆ. ಚಿಂಚೋಳಿಯ ಪೂರ್ವಕ್ಕೆ

ಐನಾಪುರ, ಪಶ್ಚಿಮಕ್ಕೆ ರಟ್ಕಲ್, ಉತ್ತರಕ್ಕೆ ತುಮಕುಂಟಾ, ದಕ್ಷಿಣಕ್ಕೆ ಶಿರೋಳ್ಳಿ ಪ್ರದೇಶಗಳನ್ನು ಮತ್ತು ಈಶಾನ್ಯಕ್ಕೆ ಐನೊಳ್ಳಿ, ಆಗ್ನೆಯಕ್ಕೆ ಮಿರಾಣ್ಯ, ನೈರುತ್ರಕ್ಕೆ ಗಡಿಕೇಶ್ವರ, ವಾಯುವ್ಯಕ್ಕೆ ಚೇಂಗಟಾ ಪ್ರದೇಶಕ್ಕೆ ಹೊಂದಿಕೊಂಡಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದ ಪ್ರತಿಯೊಂದು ಪ್ರಾಚೀನ ದೇವಾಲಯದ ವಾಸ್ತುರಚನೆಯನ್ನು ಅಧ್ಯಯನ ಮಾಡಿ ಶೈಲಿಗಳನ್ನು ಗುರುತಿಸಿಕೊಂಡು ಅವುಗಳ ಗುಣಲಕ್ಷಣಗಳನ್ನು ಕಂಡುಕೊಳ್ಳಲಾಗುವುದು. ಅವುಗಳ ವಾಸ್ತು ವಿವರಣೆಯನ್ನು ಚರ್ಚಿಸುವಾಗ ಮೊದಲು ವಾಸ್ತುರಚನೆಯನ್ನು (ಗರ್ಭಗೃಹದಿಂದ ಮುಖ ಮಂಟಪದವರೆಗೆ) ನಂತರ ಊರ್ಧ್ವಮುಖ ವಾಸ್ತುರಚನೆಯನ್ನು (ಅಧಿಷ್ಠಾನದಿಂದ ಕಳಸದವರೆಗಿನ) ಪರಿಶೀಲಿಸಿ ಅವುಗಳಲ್ಲಿರುವ ವಿವಿಧ ಉಪಾಯಗಳ ವಾಸ್ತು ಲಕ್ಷಣಗಳನ್ನು ಗುರುತಿಸಲಾಗಿದೆ. ದೇವಾಲಯಗಳಲ್ಲಿ ಮತ್ತು ಅವುಗಳ ಪರಿಸರದಲ್ಲಿ ಕಂಡುಬಂದ ಶಿಲ್ಪಗಳನ್ನು ಮಧ್ಯಮ ಶೈಲಿ, ಕಲಮಾನ ಮತ್ತು ಪ್ರತಿಮಾ ಲಕ್ಷಣಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಉಬ್ಬುಶಿಲ್ಪಗಳನ್ನ ಗಣನೆಗೆ ತೆಗೆದುಕೊಂಡು ವಿಷಯ ನಿರೂಪಣೆಗಾಗಿಅವುಗಳ ಉಪಯುಕ್ತತೆಯನ್ನು ವಿಂಗಡಿಸಿ ಅದ್ಯಯನ ಮಾಡಿದ್ದೇನೆ. ಹಾಗೆಯೇ ಅಲ್ಲಿನ ಭಾಷೆ ಅವರ ವೇಷ ಭೂಷಣ ಆ ದೇವಸ್ಥಾನದ ಸಾಂಸ್ಕೃತಿಕ ಚಟುವಟಿಕೆಗಳು ಊರಿನಲ್ಲಿ ಜನರ ಬಾಂಧವ್ಯ, ಭಾವೈಕ್ಯತೆಯು ಬಗ್ಗೆ ಊರ ಹಿರಿಯರಲ್ಲಿ ವಿಚಾರಣೆಗೈದು ಸಂದರ್ಶನವನ್ನು ಮಾಡಿದ್ದೇನೆ.

# ಅಧ್ಯಾಯ-೨

## ಚಿಂಚೋಳಿ ತಾಲೂಕಿನ ಐತಿಹಾಸಿಕ ಹಿನ್ನಲೆ ಮತ್ತು ಭೌಗೋಳಿಕ ವಿಸ್ತಾರ

ಈ ಹಿನ್ನೆಲೆಯಿಂದ ನಮಗೆ ತಿಳಿದು ಬಂದಿರುವುದೇನೆಂದರೆ ಚಿಂಚೋಳಿಯನ್ನು ಸಿನ್ಮೂಲಿ, ಚಿಂಚೋಳಿ ಎಂತಲೂ ಕರೆಯಲಾಗುತ್ತದೆ. ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ಚಿಂಚೋಳಿ ತಾಲೂಕಿನ ಇತಿಹಾಸ ಕ್ರಿ.ಶ 1ನೇ ಶತಮಾನದಲ್ಲಿಯೇ ತೆರೆದುಕೊಳ್ಳುತ್ತದೆ. ಸುಮಾರು 10–11ನೇ ಶತಮಾನದಲ್ಲಿ ಮನ್ನೆರಡಿ ಸಾಸಿರನಾಡು (ಮನ್ನರಡಿ–1000) ಎಂದು ಆಳಲ್ಪಡುತ್ತಿದೆ. ಈ ತಾಲೂಕು ಕೇಂದ್ರವಾದ ಕಾಳಗಿಯನ್ನು ರಾಜಧಾನಿಯನ್ನಾಗಿ ಹೊಂದಿತ್ತು.ದಟ್ಟವಾದ ಅರಣ್ಯ ಪ್ರದೇಶ, ಗುಡ್ಡ ಗಾಡಿನಿಂದ ಕೂಡಿರುವ ಈ ಪ್ರದೇಶದಲ್ಲಿ ಅಲೆಮಾರಿಗಳಾದ ಚಂಚರು, ಗಡ್ಡೆ-ಗೆಣಸು, ಅಗೆದು ಆಯ್ದು ಮಾರಾಟ ಮಾಡಿ ಜೀವನ ನಡೆಸುತ್ತಿದ್ದರು, ಇವರು ಚಂಚರು ಗಡ್ಡೆಯರೆಂದೇ ಹೆಸರಾಗಿದ್ದರು. (ಸಿರಿಗಂಧ, 2003 ಪೂರ್ವ) ಚಂಚರಗಡ್ಡೆ ಎನ್ನುವಲ್ಲಿ ಗಡ್ಡೆ ಲೋಪವಾಗಿ ಚಂಚರ ಹಳ್ಳಿ ಮುಂದೆ, ಚಂಚವಳ್ಳಿಯಾಯಿತು, ಚಂಚವಳ್ಳಿ–ಚಿಂಚವಳ್ಳಿ–ಚಿಂಚೋಳಿಯಾಯಿತೆನ್ನಬಹುದು.

ಕ್ರಿ.ಶ 1–2ನೇ ಶತಮಾನದಲ್ಲಿ ಕರ್ನಾಟಕವನ್ನು ಆಳಿದ ಶಾತವಾಹನರ ಆಡಳಿತಕ್ಕೆ ಈ ಭಾಗ ಒಳಪಟ್ಟಿತ್ತು. ಅತ್ಯಂತ ವೈಭವದಿಂದ ಆಳಿದ ರಾಷ್ಟ್ರಕೂಟರ ಕಾಲದಲ್ಲಿಯಂತೂ ಚಿಂಚೋಳಿ ಅತ್ಯಂತ ಮಹತ್ವಪೂರ್ಣ ಸ್ಥಾನದಲ್ಲಿತ್ತು. ರಾಷ್ಟ್ರಕೂಟರ ಚಕ್ರಾಧಿಪತಿಗಳ ದಂಡಾಧಿಪತಿ ಇದ್ದದ್ದು ಜೇವರ್ಗಿ, ಚಿತ್ತಾಪುರ ತಾಲೂಕಿನ ದಂಡೋತಿಯಲ್ಲಿ ಜೇವರ್ಗಿ ನಿಜಾಮ ಸರಕಾರದ ಕಾಲದಲ್ಲಿ 50 ಹಳ್ಳಿಗಳನ್ನು ಹೊಂದಿದ ಪೈಗಾ ಜಾಗೀರು ಕೇಂದ್ರವಾಗಿತ್ತು 1947ರ ಭಾರತ ಸ್ವಾತಂತ್ರ್ಯ ನಂತರ ಮತ್ತು 1957ರ ಕರ್ನಾಟಕದ ಏಕೀಕರಣದ ನಂತರ ತಾಲೂಕು ಹೆಚ್ಚಿನ ಸ್ಥಾನಮಾನ ಹೊಂದಿ ವಿಧಾನಸಭಾ ಕ್ಷೇತ್ರವಾಗಿ ಹೊರ ಹೊಮ್ಮಿತು.

ಕಲಬುರಗಿ ಜಿಲ್ಲೆಯಲ್ಲಿ ಚಿಂಚೋಳಿ ತಾಲೂಕು ಒಂದಾಗಿದೆ. ಕಲಬುರಗಿದಿಂದ ಈಶಾನ್ಯಕ್ಕೆ 50 ಕಿ.ಮೀ ಬೆಂಗಳೂರಿನಿಂದ ಉತ್ತರಕ್ಕೆ ಸುಮಾರು 511 ಕಿ.ಮೀ ದೂರದಲ್ಲಿ ಭೀಮಾ ನದಿಯ ಉಪನದಿ ಕಾಗಿಣೆಯ ಉಪನದಿಯಾದ ಮುಲ್ಲಾಮುರಿ ನದಿಯ ಎಡದಂಡೆಯ ಮೇಲಿರುವ ಚಾರಿತ್ರಿಕ ಮಹತ್ವದ ಸ್ಥಳವಾಗಿದೆ. ಭೌಗೋಳಿಕವಾಗಿ $77^0$–04 ರಿಂದ $77^0$–43 ಉತ್ತರ ಅಕ್ಷಾಂಶ ಹಾಗೂ $17^0$–12 ರಿಂದ $17^0$–38 ಪೂರ್ವ ರೇಖಾಂಶಗಳ ನಡುವೆ ಸಮತಟ್ಟವಾದ ಪ್ರದೇಶದಲ್ಲಿ ಹರಡಿಕೊಂಡಿದೆ. ಸರಾಸರಿ ಎತ್ತರ 462 ಮೀಟರ್ (1515 ಅಡಿ) ಹೊಂದಿದೆ. ಪಟ್ಟಣವು 6 ಚದರ ಕಿ.ಮೀ ಪ್ರದೇಶದ ಮೇಲೆ ಹರಡಿದೆ. ಇದರ ಸಮವಲಯ ಐ.ಎಸ್.ಟಿ (ಯು.ಟಿ.ಸಿ + 5.30) ಆಗಿದೆ. ಚಿಂಚೋಳಿ ತಾಲೂಕು ಕೇಂದ್ರವಾದಂತಹ ಸುಲೇಪೇಟ, ಗಡಿಕೇಶ್ವರ, ಗೊಟ್ಟಂಗೊಟ್ಟಿ, ಕೋಡ್ಲಿ, ನಿಡಗುಂದ, ಮೊಘಾ, ಮಿರ್ಯಾಣ, ಪಸ್ತಪುರ ಚಿಂಚೋಳಿ ಘುಲತೋಟ, ಕೊರಳ್ಳಿ, ಹಾರಕೂಡ, ಪ್ರದೇಶಗಳು ಪ್ರಸಿದ್ಧವಾದಂತಹವು"".

## ➢ ಜನಸಂಖ್ಯೆ:

2001ರ ಜನಗಣತಿಯ ಪ್ರಕಾರ ತಾಲೂಕಿನ ಜನಸಂಖ್ಯೆ 2,23,645 ರಷ್ಟು ಇದ್ದಿತು. 2011ರ ಜನಸಂಖ್ಯೆ ಜನಗಣತಿಯ ಪ್ರಕಾರದಲ್ಲಿ 2,54,287 ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ 1,27,148 ಪುರುಷರು ಮತ್ತು 1,26,539 ಮಹಿಳೆಯರು ಚಿಂಚೋಳಿಯಲ್ಲಿ ಒಟ್ಟು 48,431 ಕುಟುಂಬಗಳು ಇದ್ದವು. ಚಿಂಚೋಳಿಯಲ್ಲಿ ಸರಾಸರಿ 991 ಅನುಪಾತದಷ್ಟು ಸೆನ್ಸೆಸ್ ಇದೆ, 2011ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆಯಲ್ಲಿ 8.2% ಜನರು ನಗರ ಪ್ರದೇಶಗಳಲ್ಲಿ ವಾಸಿಸುತ್ತಿದಾರೆ ಮತ್ತು ಗ್ರಾಮೀಣ ಪ್ರದೇಶದಲ್ಲಿ ಸರಾಸರಿ ಸಾಕ್ಷರತೆಯ 60.1% ರಷ್ಟಿದೆ”[೨].

ಚಿಂಚೋಳಿ ಪ್ರದೇಶದ ಲಿಂಗ ಅನುಪಾತವು 926 ಗ್ರಾಮೀಣ ಪ್ರದೇಶದಲ್ಲಿ ಲಿಂಗಾನುಪಾತವು 997 ಆಗಿದೆ, 0–6 ವರ್ಷ ವಯಸ್ಸಿನ ಮಕ್ಕಳ ಸಂಖ್ಯೆ 36,218 ಆಗಿದೆ. ಇದು ಒಟ್ಟು ಜನಸಂಖ್ಯೆ 14% ಆಗಿದೆ. 0–6 ವರ್ಷ ವಯಸ್ಸಿನ ನಡುವೆ 18,533 ಪುರುಷ ಮಕ್ಕಳು ಮತ್ತು 17,685 ಸ್ತ್ರಿ ಮಕ್ಕಳು ಇದ್ದಾರೆ” [೩].

## ➢ ಹವಾಮಾನ:

ಇಲ್ಲಿ ಬೇಸಿಗೆಯಲ್ಲಿ ತುಂಬಾ ಬಿಸಿಯಾಗಿರುತ್ತದೆ. ಉಷ್ಣತೆಯು $33^0$ ಛಿ ರಿಂದ $40^0$ ಛಿ ನಡುವೆ ಇರುತ್ತದೆ. ಜನವರಿಯ ಸರಾಸರಿ ತಾಪಮಾನ $25^0$ ಛಿ ಫೆಬ್ರುವರಿ $25^0$ ಛಿ ಮಾರ್ಚ $30^0$ ಛಿ ಎಪ್ರೀಲ್ $36^0$ ಛಿ ಇರುತ್ತದೆ. ಚಿಂಚೋಳಿ ತಾಲೂಕಿನಲ್ಲಿ ಆಹ್ಲಾದಕರವಾದ ವಾಯುಗುಣಗಳು ಕಂಡು ಬರುತ್ತದೆ. ಈ ಪ್ರದೇಶ ಸಮುದ್ರ ಮಟ್ಟಕ್ಕಿಂತ ಹೆಚ್ಚು ಎತ್ತರದಲ್ಲಿದ್ದು ಹೆಚ್ಚು ಮರ ಗಿಡಗಳು ಇರುವುದರಿಂದ ಇಂತಹ ವಾತಾವರಣಕ್ಕೆ ಕಾರಣವಾಗಿದೆ.

ಈ ತಾಲೂಕಿನ ವಾರ್ಷಿಕ ಮಳೆ 230ರಿಂದ 890 ಮಿ.ಮೀ ರಷ್ಟಿದೆ. ರಾಜ್ಯದಲ್ಲಿ ಮಧ್ಯಮ ಪ್ರಮಾಣದಿಂದ ಕಡಿಮೆ ಪ್ರಮಾಣದಲ್ಲಿ ಮಳೆ ಬರುವ ಪ್ರದೇಶದಲ್ಲಿ ಈ ತಾಲೂಕು ಇರುವುದರಿಂದ ಸಾಮಾನ್ಯವಾಗಿ ಬರಗಾಲ ಮತ್ತು ಕ್ಷಾಮ ಪರಿಸ್ಥಿತಿಗಳು ಆಗಾಗ ಗೋಚರಿಸುತ್ತದೆ” [೪].

## ➢ ಚಿಂಚೋಳಿ ತಾಲೂಕಿನ ಜೀವ ನದಿಗಳು:

ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನ ಮಚಾಲ ಬಳಿ ಹುಟ್ಟುವ ಮುಲ್ಲಾಮಾರಿ ಕಲಬುರಗಿ ಜಿಲ್ಲೆಯ ರನ್ನಿ ಗ್ರಾಮದ ಬಳಿ ಪ್ರವೇಶಿಸುತ್ತದೆ. ಮುಂದೆ ಸುಮಾರು 13 ಕಿ.ಮೀ ಕಲಬುರಗಿ ಜಿಲ್ಲೆಯ ಒಳಗೆ ಹರಿದು ಮತ್ತು ಕೊಡಗಿ ಗ್ರಾಮದವರೆಗೆ ಕಲಬುರಗಿ ಮತ್ತು ಬೀದರ ಜಿಲ್ಲೆಗಳ ಗಡಿಯಾಗಿ ಹರಿಯುತ್ತದೆ. ನಂತರ ಅದೇ ದಿಕ್ಕಿನಲ್ಲಿ ಹರಿದು ಚಿಂಚೋಳಿ ಪಟ್ಟಣ ತಲುಪುತ್ತದೆ. ಚಿಂಚೋಳಿಯು ಮುಲ್ಲಾಮುರಿ ನದಿಯ ಎಡ ದಂಡೆಯ ಮೇಲಿದೆ.ತಾಲೂಕಿನ ಸುತ್ತಮುತ್ತಲೂ ಇರುವ ಜಲಸಂಪನ್ಮೂಲಗಳೆಂದರೆ

1. ಸುಕ್ಷೇತ್ರ ಬುಗ್ಗಿ
2. ಚಂದ್ರಂಪಳ್ಳಿ ಜಲಾಶಯ
3. ಎತ್ತಿಪೋತ ಧಬಧಬೆ

4. ನಾಗರಾಳ ಜಲಾಶಯ
5. ಬೆಣ್ಣೆತೊರೆ
6. ಕಾಗಿಣ ಉಪನದಿಗಳು

➢ **ಪ್ರಮುಖ ಬೆಳೆಗಳು:**

ಚಿಂಚೋಳಿ ತಾಲೂಕಿನಲ್ಲಿ ಕರೆಕಲ್ಲು ಮಣ್ಣು, ಮಧ್ಯಮ ಕಪ್ಪು ಮಣ್ಣು ಹಾಗೂ ಆಳವಾದ ಕಪ್ಪು ಮಣ್ಣು ಕಂಡು ಬರುತ್ತದೆ. ಮರಳು ಮಿಶ್ರಿತ ಜೇಡಿ ಮಣ್ಣು ಕಂಡುಬರುತ್ತದೆ ಹಾಗೂ ಜಂಬಿಟ್ಟಿಗೆಯ ಮಣ್ಣುಸಹ ಕೆಲವೆಡೆ ಕಂಡುಬುತ್ತದೆ. ಕಪ್ಪು ಮಣ್ಣು ನೈಸ್ ಶಿಲೆ, ಪದರ ಕಲ್ಲು, ಮುಂತಾದ ಶಿಲೆಗಳಿಂದ ರೂಪುಗೊಂಡಿರುವ ಆಳವಾದ ತಾಲೂಕಿನಲ್ಲಿ ಅಧಿಕವಾಗಿದೆ. ಕಡುಕೆಂಪು ಬಣ್ಣದಿಂದ ಮಾಸಲು ಕೆಂಪು ಬಣ್ಣದ ಮರಳು ಮಿಶ್ರಿತ ಜಂಬಿಟ್ಟಿಗೆಯ ಮಣ್ಣಿನ ಮಾದರಿಯನ್ನು ಇಲ್ಲಿ ಗುರುತಿಸಬಹುದು., ಫಲವತ್ತತೆಯ ಬೀಡಾದ ಈ ತಾಲೂಕಿನಾದ್ಯಂತ ಜೋಳ, ಗೋಧಿ, ಹತ್ತಿ, ಕುಸುಬೆ, ನೆಲಗಡಲೆ ಎಳ್ಳು, ಮೆಣಸಿನಕಾಯಿ, ತೊಗರಿ, ಕಡಲೆ, ಹೆಸರು, ಉದ್ದು, ಶೇಂಗಾ, ಸೂರ್ಯಕಾಂತಿ, ಕಬ್ಬು ಇತರ ತರಕಾರಿಗಳು, ಬಾಳೆ, ತಂಬಾಕು ವೀಳ್ಯದ ಎಲೆ, ಸಜ್ಜೆ ಅಧಿಕ ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ" [೫].

➢ **ಅರಣ್ಯ ಪ್ರದೇಶ:**

ಕಲಬುರಗಿ ಜಿಲ್ಲೆಯ 62,000 ಹೆಕ್ಟರ್ ಅರಣ್ಯ ಪ್ರದೇಶದಲ್ಲಿ 20,776 ಹೆಕ್ಟರ್ ಅರಣ್ಯ ಪ್ರದೇಶ ಚಿಂಚೋಳಿ ತಾಲೂಕು ಒಂದರಲ್ಲಿಯೇ ಹರಡಿದೆ. ಅಂತಾವರಮ, ಚಂದ್ರಪಳ್ಳಿ, ಸಾಲೇಬೀರನಳ್ಳಿ ಗೊಟ್ಟಂಗೊಟ್ಟಿ, ಬುರಗಬಳ್ಳಿ ಇವೆಲ್ಲಾ ಅರಣ್ಯ ಹರಡಿರುವ 14,922 ಹೆಚ್ಟರ್ ಅರಣ್ಯ ಕಾಯ್ದಿಟ್ಟ ಅರಣ್ಯ ಪ್ರದೇಶ, ಚಿಂಚೋಳಿ ತಾಲೂಕು ಅತಿ ಹೆಚ್ಚು ಸಸ್ಯ ಸಂಪತ್ತು ಹೊಂದಿರುವ ತಾಲೂಕು ಆಗಿದೆ. ಅಲ್ಲದೇ ಗೊಟಂಗೊಟ್ಟಿ ಅರಣ್ಯ ಪ್ರದೇಶವು ಒಂದು ಅದ್ಭುತ ತಾಣವಾಗಿದೆ. ಕರ್ನಾಟಕ ಸರಕಾರದ ಯೋಜನೆಯ ಅಡಿಗೆ ಒಳಪಟ್ಟಿದೆ.

ಭೌಗೋಳಿಕವಾಗಿ ಒಟ್ಟು ವಿಸ್ತೀರ್ಣ 15,5854 ಆಗಿದೆ. ಸಾಗುವಳಿಗೆ ಲಭ್ಯವಿಲ್ಲದ ಭೂ ಪ್ರದೇಶ ಬೀಳು ಭೂಮಿ 3.818, ಬಿತ್ತನೆ ಪ್ರದೇಶ 129631. ನೈರುತ್ಯ ಮಾನ್ಸುನ ಅವಧಿಯಲ್ಲಿ ಆಕಾಶದಲ್ಲಿ ಮಧ್ಯಮ ಪ್ರಮಾಣದಿಂದ ಮೋಡಗಳು ಕಂಡುಬರುತ್ತದೆ. ಮೋಡಗಳ ಮುಸುಗುವಿಕೆ ಮಾನ್ಸೂನ ನಂತರ ಅವಧಿಯಲ್ಲಿ ಕಡಿಮೆ ಇರುತ್ತದೆ. ಇನ್ನು ಉಳಿದ ಕಾಲಾವಧಿಯಲ್ಲಿ ಆಕಾಶ ಶುಭ್ರವಾಗಿರುತ್ತದೆ" [೬].

- **ಕೈಗಾರಿಕೆಗಳು :**

ಚಿಂಚೋಳಿ ತಾಲೂಕಿನಲ್ಲಿ ಸುಮಾರು 400 ನೀಲಿ ಕಲ್ಲಿನ ಗಣಿಗಳು ಸುಮಾರು 200 ಶಹಬಾದ ಶಿಲೆಗಳ ಗಣಿಗಳು ಕಾರ್ಯ ನಿರ್ವಹಿಸುತ್ತಿದ್ದು ನೀರು, ಎಣ್ಣೆ ಮೊದಲಾದ ಶುದ್ಧೀಕರಣಕ್ಕೆ ಬೇಕಾದ 'ಘುಲ್ಲರ್ಸ ಅರ್ಥ' ತಾಲೂಕಿನ ಸುಲೇಪೇಟ ಚಿಮ್ಮಾ ಇದಲಾಯಿ, ದಸ್ತಾಪುರ, ಕೊಡ್ಲಿ, ಮುಂತಾದ ಕಡೆ ಲಭಿಸುತ್ತದೆ. ಈ ತಾಲೂಕಿನ ಕುರುಬರು ಉಣ್ಣೆನೆಯ್ಗೆಯಿಂದ ಕಂಬಳಿಯನ್ನು ತಯಾರಿಸುವಲ್ಲಿ ಸಿದ್ಧ ಪ್ರವೀಣರು, ಸಣ್ಣ ಪ್ರಮಾಣದ ರಬ್ಬರ ಮತ್ತು ಪ್ಲಾಸ್ಟಿಕ ವಸ್ತುಗಳ ತಯಾರಿಕಾ ಘಟಕಗಳು ತಾಲೂಕಿನಲ್ಲಿ ಕಂಡುಬರುತ್ತದೆ.

ಚಿಂಚೋಳಿ ತಾಲೂಕಿನ 1500 ಚ. ಮೈ. ಪ್ರದೇಶದಲ್ಲಿ ಸುಣ್ಣದ ಶಿಲೆಗಳು ನಿಕ್ಷೇಪಗಳು, ದೊರೆಯುತ್ತವೆ. ಚಿಂಚೋಳಿ ತಾಲೂಕಿನ ಬಹುತೇಕ ಗ್ರಾಮಗಳಲ್ಲಿ ಹಾಳು ಮಣ್ಣು ಹೇರಳವಾಗಿ ದೊರೆಯುತ್ತದೆ. ಇಟ್ಟಿಗೆ ತಯಾರಿಸುತ್ತಾರೆ, ಶಹಬಾದ, ವಾಡಿ ಮಳಖೇಡ, ಸೇಡಂ, ಕುರುಕುಂಟಾಗಳ ಸಿಮೇಂಟ್ ಕಾರ್ಖಾನೆಗಳು ಚಿಂಚೋಳಿ ತಾಲೂಕಿನ ಸಮೀಪ ಇವೆ. ಹತ್ತಿ ಬಟ್ಟೆ ತಯಾರಿಸುವ ಕಾರ್ಮಿಕರ ಬದುಕಿಗೆ ಆಸರೆಯಾಗಿದೆ. ಬುಟ್ಟಿ ನೇಯುವುದು ಇದೆ. ಚಿಂಚೋಳಿ ತಾಲೂಕಿನ ನಿಡಗುಂದಿ ಪ್ರದೇಶದಲ್ಲಿ ಬೀಡಿ ತಯಾರಿಸುವಂತಹ ಕಾರ್ಖಾನೆಗಳಿವೆ. ಚಿಂಚೋಳಿ ತಾಲೂಕಿನಲ್ಲಿ ಹಾಸುಕಲ್ಲಿನ ಗಣಿಗಳಿವೆ. ಇವೆಲ್ಲದರಿಂದಾಗಿ ಈ ತಾಲೂಕು ಸಂಪತದ್ಭರಿತ ಪ್ರದೇಶವಾಗಿದೆ.

- **ಪ್ರಾಣಿ ಸಂಪತ್ತು :**

ಗುಲ್ಬರ್ಗಾ ಜಿಲ್ಲೆಯ ಇಂದಿನ ಪರಿಸರದಲ್ಲಿ ವನ್ಯ ಮೃಗಗಳು ಹೆಚ್ಚಾಗಿಲ್ಲ. ಇಂದು ನಾಡಿನೆಲ್ಲೆಡೆ ಜನರು ಜಲವಿಲ್ಲದೆ ಒದ್ದಾಡುತಿದ್ದಾರೆ. ಉತ್ತಮ ಮಳೆ ಬರಬೇಕಾದರೆ ಅದಕ್ಕೆ ಅರಣ್ಯಬೇಕು. ಚಿಂಚೋಳಿಯ ಕಾಡುಗಳಲ್ಲಿ ಕತ್ತೆಕಿರುಬ, ತೋಳ, ಕಾಡುನಾಯಿ, ಜಿಂಕೆ, ನರಿ ಮುಂತಾದ ಪ್ರಾಣಿಗಳನ್ನು ಕಾಣಬಹುದಾಗಿದೆ. ಅಲ್ಲದೇ ಸಾಕು ಪ್ರಾಣಿಗಳಾದಂತಹ ದನ-ಕರುಗಳು, ನಾಯಿ, ಬೆಕ್ಕುಗಳು ಕೂಡ ಕಂಡುಬರುತ್ತವೆ. ಗಿಳಿ, ಮೈನಾ, ಮರಕುಟಿಗ, ನವಿಲು, ಗೂಬೆ, ನಾಯಿ, ಹದ್ದು, ಹಾಡುಹಕ್ಕಿ ಮತ್ತು ಪಾರಿವಾಳಗಳು ಬಹುತೇಕ ವಿರಳವಾಗುತ್ತಿವೆ. ಅಲ್ಲದೆ ಗೊಟ್ಟಂಗೊಟ್ಟಾ ಅರಣ್ಯ ಪ್ರದೇಶದಲ್ಲಿ ಕೆಲವೊಂದು ಪ್ರಾಣಿಗಳನ್ನು ಕಾಣಬಹುದಾಗಿದೆ. ವಿಶಿಷ್ಟವಾಗಿ ಹೈದ್ರಾಬಾದ ಕರ್ನಾಟಕ ಪ್ರದೇಶದ 6 ಜಿಲ್ಲೆಗಳನ್ನೆ ತೆಗೆದುಕೊಂಡರೆ ನಮಗೆ ಸಿಗುವುದು ಬರಿ ಬಿಸಿಲು ಗುಡ್ಡಗಾಡು-ಬೆಟ್ಟ ಪ್ರದೇಶವೆ.

- **ಸಾರಿಗೆ ಸಂಪರ್ಕ :**

ಚಿಂಚೋಳಿ ತಾಲ್ಲೂಕಿಗೆ ಹೋಗಲು ಸಾರಿಗೆ ವ್ಯವಸ್ಥೆಯು ತುಂಬಾ ಚೆನ್ನಾಗಿದೆ. ಗುಲ್ಬರ್ಗಾದಿಂದ ಚಿಂಚೋಳಿಗೆ ಹೋಗಲು ಎರಡು ಕಡೆಯಿಂದಲೂ ಮಾರ್ಗವಿದೆ. ಒಂದು ಕಾಳಗಿ ಇನ್ನೊಂದು ರಟಕಲ್ ಮಾರ್ಗದಿಂದ ಹೋಗಬಹುದು. ಕರ್ನಾಟಕ ರಾಜ್ಯ ಮತ್ತು ಹತ್ತಿರದ ರಾಜ್ಯಗಳಿಗೆ ಪ್ರಯಾಣಿಲು ಕೆ.ಎಸ್.ಆರ್.ಟಿ.ಸಿ. ಬಸ್ಸಿನ ಸೌಲಭ್ಯವಿದೆ. ಹತ್ತಿರದಲ್ಲಿ ರೈಲು ನಿಲ್ದಾಣ ಆಗಿದೆ. ಹತ್ತಿರದಲ್ಲಿಯೇ (146 ಕಿ.ಮೀ.) ಹೈದ್ರಾಬಾದ ರಾಜೀವಗಾಂಧಿ ಅಂತರಾಷ್ಟ್ರೀಯ ವಿಮಾನ ನಿಲ್ದಾಣವಿದೆ. ಚಿಂಚೋಳಿಯನ್ನು ಸಂಪರ್ಕಿಸಲು ಯಾವ ರೈಲು ಸೌಲಭ್ಯವಿಲ್ಲ ತಾಂಡೂರ (ಆಂಧ್ರ ಪ್ರದೇಶ) 36 ಕೀ.ಮೀ. ಗುಲ್ಬರ್ಗಾ 80 ಕೀ.ಮೀ. ದೂರದಲ್ಲಿ ರೈಲ್ವೆ ಸ್ಟೇಶನ್ ಇವೆ. ಹಾಗೂ ಜಹಿರಬಾದ ರೈಲ್ವೆ ನಿಲ್ದಾಣವು ಇದೆ" [೭].

- **ಧಾರ್ಮಿಕ ಸಹಿಷ್ಣುತೆ :**

ಚಿಂಚೋಳಿ ತಾಲೂಕಿನಲ್ಲಿ ಹಿಂದೂ ಮುಸ್ಲಿಂ, ಜೈನ, ಕ್ರೈಸ್ತ ಧರ್ಮಿಯರು ಧಾರ್ಮಿಕ ಸಹಿಷ್ಣುತೆಯೊಂದಿಗೆ ಜೀವನ ಸಾಗಿಸುತ್ತಿದ್ದಾರೆ. ಚಿಂಚೋಳಿಯಲ್ಲಿ ಜೈನ ಧರ್ಮದ ಅವಶೇಷಗಳು ದೊರೆತಿವೆ. ಅಲ್ಲದೇ ಈ ತಾಲೂಕಿನ ಇನ್ನೊಂದು ವೈಶಿಷ್ಟವೆಂದರೆ, ತಾಲೂಕಿನ ಪ್ರತಿ ಗ್ರಾಮದಲ್ಲೂ ಕೂಡಾ ಒಂದು ಅಥವಾ ಅದಕ್ಕಿಂತ ಹೆಚ್ಚು ದರ್ಗಾಗಳು ಕಂಡು

ಬಂದಿರುವುದು ಇದು ತಾಲೂಕಿನ ಧರ್ಮಸಹಿಷ್ಣುತೆಗೆ ಹಿಡಿದ ಕೈಗನ್ನಡಿಯಾಗಿದೆ ಎಂದು ಹೇಳಬಹುದು.

**2011ರ ಪ್ರಕಾರ ಜನಸಂಖ್ಯೆ**

| ಕ್ರಸಂಖ್ಯೆ | ಧರ್ಮ | ಒಟ್ಟು | ಪುರುಷರು | ಮಹಿಳೆಯರು |
|---|---|---|---|---|
| 01 | ಹಿಂದೂ | 2140.75 (84.19%) | 107.558 | 106.517 |
| 02. | ಮುಸ್ಲಿಂ | 38.781 (5.25%) | 19.487 | 19.294 |
| 03. | ಕ್ರೈಸ್ತರು | 508 (0.2%) | 264 | 244 |
| 04. | ಸಿಖ್ | 38 (0.01%) | 23 | 15 |
| 05. | ಬೌದ್ಧರು | 96 (0.04%) | 52 | 44 |
| 06. | ಜೈನರು | 45 (0.02%) | 17 | 28 |
| 07. | ಇತರರು | 31 (0.01%) | 19 | 12 |

**ಅಡಿ ಟಿಪ್ಪಣಿಗಳು:**

೧) ಎಂ. ಬಿ. ಪಾಟೀಲ ಗುಲಬರ್ಗಾ ಜಿಲ್ಲೆ ಗ್ಯಾಜಿಟೇರಿಯನ್ – ೧೯೯೭ ಪುಟ ಸಂಖ್ಯೆ.೭೨೪

೨) ಕೆ.ಎನ್. ಅಶ್ವತ್ಥಪ್ಪ ಸಮಗ್ರ ಭಾರತದ ಇತಿಹಾಸ ಸಂಪುಟ – ೧ ಪುಟ ಸಂಖ್ಯೆ

೩) ಎಂ.ಬಿ.ಪಾಟೀಲ ಗುಲಬರ್ಗಾ ಜಿಲ್ಲೆ ಗ್ಯಾಜಿಟೇರಿಯನ್–೧೯೯೭ ಪುಟ ಸಂಖ್ಯೆ ೭೨೫

೪) ಅದೇ ಪುಟ–೭೨೬

೫) ಅದೇ ಪುಟ –೭೨೭

೬) ಅದೇ ಪುಟ –೭೨೮

೭) ಗುಲಬರ್ಗಾ ಜಿಲ್ಲೆಯ ಅಂಕಿ ಅಂಶಗಳ ಪಕ್ಷಿನೋಟ ೨೦೧೧-೧೨, ಪುಟ–೧೧೦

೮) ಅದೇ ಪುಟ –೧೧೨

# ಅಧ್ಯಾಯ – ೩
# ಚಿಂಚೋಳಿ ತಾಲೂಕಿನ ದೇವಸ್ಥಾನಗಳ ಸಾಂಸ್ಕೃತಿಕ ಅಧ್ಯಯನ

## ೩.೧ ಸಂಸ್ಕೃತಿಯ ಅರ್ಥ:

"ಸಂಸ್ಕೃತಿ ಎಂಬ ಪದವು ಇಂಗ್ಲೀಷನ ಕಲ್ಚರ್ (Culture) ಎಂಬುದಕ್ಕೆ ಸಂವಾದಿಯಾಗಿ ಬಂದಿದೆ. ಲ್ಯಾಟಿನ ಭಾಷೆಯ (ಕಲ್ಪ) ಅಥವಾ (ಕಲ್ಕಸ್) ಎಂಬುದು ಶಬ್ದದ ಮೂಲ ಪದವಾಗಿದ್ದು ಗೌರವಿಸು, ಆರಾಧಿಸು, ಲಕ್ಷ್ಯದಲ್ಲಿಡು/ಇರಿಸಿಕೊ ಎಂದು ಇದರ ಅರ್ಥವಾಗಿದೆ. 'ಕೃಷಿ ಎನ್ನುವ ಅರ್ಥದಲ್ಲಿಯೂ ಇದನ್ನು ಬಳಸುತ್ತಾರೆ. ಈ ಪದದಿಂದ ಅಗ್ರಿಕಲ್ಚರ್ (Agriculture) ಬೇಸಾಯ, (Hortiulture) ಹಾರ್ಟಿಕಲ್ಚರ್ ತೋಟಗಾರಿಕೆ (ಆರ್ಚೋರಿಕಲ್ಚರ್) ಮರ, ರೇಶ್ಮಿಗಾರಿಕೆ (Sericulture ) ಎಂಬವುಗಳು ರೂಪತಾಳಿದವು. ಸಂಸ್ಕೃತಿ ಎಂಬುದು ಇತ್ತಿತ್ತಲಾಗಿ ಬಳಕೆಗೆ ಬಂದ ಪದ. ಇದು ಭಾರತೀಯ ಸಂಸ್ಕೃತಿ, ಕರ್ನಾಟಕ, ಸಂಸ್ಕೃತಿ, ಮಹಾರಾಷ್ಟ್ರ ಸಂಸ್ಕೃತಿ ಎಂದು ದೇಶವಾಚಕವಾಗಿಯೂ ವೀರಶೈವ ಸಂಸ್ಕೃತಿ, ವೈದಿಕ ಸಂಸ್ಕೃತಿ, ಜೈನ ಸಂಸ್ಕೃತಿ, ಇಸ್ಲಾಂ ಸಂಸ್ಕೃತಿ ಎಂದು ಮತ ಧರ್ಮ ಸೂಚಕವಾಗಿಯೂ, ಕನ್ನಡ ಸಂಸ್ಕೃತಿ ಇಂಗ್ಲೀಷ ಸಂಸ್ಕೃತಿ ತಮಿಳು ಸಂಸ್ಕೃತಿ ಎಂದು ಭಾಷಾವಾಚಕವಾಗಿಯೂ ವಿವಿಧ ರೀತಿಯಲ್ಲಿ ಬಳಸಲ್ಪಡುತ್ತದೆ. ಏನೇ ಆದರೂ ಒಂದು ರಾಷ್ಟ್ರದ ಸಾಂಸ್ಕೃತಿಕ ಸಂಪತ್ತು ಆ ಜನರ ಗುಣ ಮೌಲ್ಯಗಳ ಮೇಲೆ ಅವಲಂಬಿತವಾಗಿರುತ್ತದೆ"[1] ಎಂಬ ಮಾತುಗಳು ಸಂಸ್ಕೃತಿ ಪದಕ್ಕಿರುವ ಅರ್ಥವಿಸ್ತಾರತೆಯನ್ನು ಮನಗಾಣಿಸುತ್ತದೆ.

"ಯಾವುದೇ ಒಂದು ಬುಡಕಟ್ಟಿನ ಇಲ್ಲವೇ ಜನಾಂಗದ ಸಾಂಸ್ಕೃತಿಕ ಅಧ್ಯಯನವೆಂದರೆ ಅವರು ಪರಂಪರೆಯಿಂದ ರೂಢಿಸಿಕೊಂಡು ಬಂದಿರುವ ರೀತಿ, ನೀತಿ–ನಡಾವಳಿ, ರೂಢಿ–ಸಂಪ್ರದಾಯ ಹಾಗೂ ನಂಬಿಕೆ, ಮೊದಲಾದ ಒಟ್ಟು ಜೀವನದ ಆಶಯವಾಗಿದೆ.

ಈ ದೃಷ್ಟಿಯಿಂದ ಸಂಸ್ಕೃತಿ ಎಂಬುದು ಒಂದು ಪರಂಪರೆಗೆ ಸೇರಿದ ಜನಸಮೂಹದ ಸಮಗ್ರ ಜೀವನ ವಿಧಾನ ಅಥವಾ ಜೀವನ ಮೌಲ್ಯವೆ ಆಗಿದೆ. ಆದ್ದರಿಂದ ಸಂಸ್ಕೃತಿಯೊಂದೇ ಮುನುಷ್ಯ ಮತ್ತು ಪ್ರಾಣಿಗಳನ್ನೇ ಪ್ರತ್ಯೇಕಿಸುವ ಪ್ರಮುಖ ಸಾಧನವಾಗಿದೆ. ಏಕೆಂದರೆ ಮಾನವ ಬದುಕಿನ ಸಮಗ್ರ ಅಂಶಗಳಲ್ಲಿ ಈ ಸಂಸ್ಕೃತಿಯು ಹಾಸು ಹೊಕ್ಕಾಗಿರುವುದರಿಂದ ಅವನನ್ನು ಸಮಾಜ ಜೀವಿ ಎಂದು ಪರಿಗಣಿಸಲಾಗಿದೆ"[2] ಎಂದು ಹೇಳಿದಂತೆ ಸಂಸ್ಕೃತಿಯಿಂದಾಗಿ ಮಾನವನ ಜೀವನವು ಉಳಿದೆಲ್ಲಾ ಜೀವಿಗಳಿಗಿಂತ ಭಿನ್ನವಾಗಿ, ಉತ್ತಮ ರೀತಿಯಲ್ಲಿ ಜೀವಿಸುತ್ತಿದ್ದಾನೆಂಬುದು ಕಣ್ಣೆದುರಿಗಿರುವ ಸತ್ಯವಾಗಿದೆ.

'ಸಂಸ್ಕೃತಿ ಎಂಬ ಪದವು ತುಂಬ ಅರ್ಥವನ್ನು ಪಡೆದು ಬೆಳೆಯುತ್ತ ಬಂದಿದೆ. ಮಾನವ ಸಮುದಾಯದ ಸಂಪ್ರದಾಯಗಳಿಂದ ಹಿಡಿದು ವೈಯುಕ್ತಿಕವಾದ ಆಚರಣೆಗಳವರೆಗೂ ಅದರ ವಿಸ್ತಾರ ಹಬ್ಬಿದೆ. ಮಾನವ ಜನಾಂಗದ ಇತಿಹಾಸವನ್ನು

ಚಿತ್ರಿಸುವಾಗ ಬಳಸುವ ಇನ್ನೊಂದು ಪದ ನಾಗರಿಕತೆ ಎಂಬುದು ಆಂಗ್ಲ ಭಾಷೆಯಲ್ಲಿ ಅದನ್ನು 'Culture' ಮತ್ತು Civitization' ಎಂದು ಕರೆಯಲಾಗಿದೆ.

ಇವೆರಡು ಪದಗಳನ್ನು ಅನೇಕ ವೇಳೆ ವಿದ್ವಾಂಸರು, ಸಮನಾರ್ಥಕಪದಗಳೆಂದು ಪ್ರಯೋಗಿಸುವುದುಂಟು. ಮಾನವ ಶಾಸ್ತ್ರಜ್ಞರು (Anthropologist) ಸಂಸ್ಕೃತಿ ಎಂಬುದನ್ನು 'ನಾಗರಿಕತೆ' ಎಂಬ ಅರ್ಥದಲ್ಲಿಯೂ ಬಳಸುತ್ತಾರೆ.

ನಮ್ಮ ಪುರಾತನ ಬದುಕಿನ ಅರಿವು ನಮಗಾಗಬೇಕಾದರೆ ಅವರ ಸಂಸ್ಕೃತಿಯ ಅಧ್ಯಯನ ಅವಶ್ಯಕ ಏಕೆಂದರೆ ತಂದೆ ಗುಣ ಮಗನಲ್ಲಿ ವಂಶ ಪರಂಪರೆಯಾಗಿ ಹರಿದು ಬಂದಿರುತ್ತದೆ. ಶರೀರ ಸಂಪರ್ಕದಿಂದ ಬಂದ ಜೀನ್ಸನ ಜೊತೆಯಲ್ಲಿ ಸಂಸ್ಕೃತಿಯೂ ಮಾನವನ ಒಳ ಸೇರುತ್ತದೆ. ಹಾಗೆ ನೋಡಿದರೆ ಸಂಸ್ಕೃತಿಯು ಅನುವಂಶಿಕವೆಂದೇ ಹೇಳಬೇಕಾಗುತ್ತದೆ. ಒಳ್ಳೆಯ ಸಂಸ್ಕೃತಿಯುಳ್ಳ ಮನೆತನದಲ್ಲಿ ಹುಟ್ಟಿದವರು ಸುಸಂಸ್ಕೃತದಿಂದ ಇರುವುದನ್ನು ಕಾಣುತ್ತೇವೆ. ಹೀಗಾಗಿ ನಾವು ನಮ್ಮ ಸಂಸ್ಕೃತಿ ಹಾಕಿ ಕೊಟ್ಟ ದಾರಿಯಲ್ಲಿಯೇ ಸಾಗಬೇಕಾಗುತ್ತದೆ.

ಒಟ್ಟಿನಲ್ಲಿ ನಮ್ಮ ಜೀವನವನ್ನು ಸರಳವಾಗಿ ಸುಂದರವಾಗಿ ಮಾಡಿಕೊಳ್ಳುವ ವಿಧಾನವೇ ಸಂಸ್ಕೃತಿ. ಲೋಕದೊಡನೆ ನಮಗಾಗುವ ನಾನಾ ಬದಲಾವಣೆಗಳಿಂದ ಆಗುವ ಸಂಸ್ಕೃತಿ ಮನುಷ್ಯನ ಬದುಕಿಗೆ ಮೆರೆಗು ತಂದು ಸದಾಚಾರದಿಂದ ನಡೆಯುವಂತೆ ಪ್ರೇರೇಪಿಸಿ, ಕಪಟ ಗುಣಗಳನ್ನು ಅಳಿಸಿ ಹಾಕಿ ಚಾರಿತ್ರಿಕ ಗುಣ ಮೌಲ್ಯಗಳನ್ನು ಕಲಿಸಿಕೊಂಡುತ್ತದೆ. ಹೃದಯವನ್ನು ಚೆನ್ನಾಗಿ ಸಂಸ್ಕರಿಸುತ್ತದೆ. ನಯ-ವಿನಯ ಸಭ್ಯತೆಗಳು ವ್ಯಕ್ತಿಯ ಗುಣ ಸ್ವಭಾವಗಳನ್ನು ತೋರಿಸಿಕೊಡುತ್ತದೆ. ಅಂಥವರು ಆಡಿದ ಮಾತಿನಲ್ಲಿ ರುಚಿ, ಪ್ರೇಮ, ವಾತ್ಸಲ್ಯ ಮೃದುತ್ವಗಳೆಲ್ಲವು ತುಂಬಿ ನಿಂತಿರುತ್ತದೆ. 'ನಾಲಿಗೆ ತನ್ನ ಕುಲವನರುಹಿತು' ಎನ್ನುವ ಕವಿಯ ಮಾತಿನಲ್ಲಿಯೂ ಇದೆ ತತ್ವ ಅಡಗಿನಿಂತಿದೆ. ನುಡಿಯುವ ಮಾತಿನಿಂದಲೇ ಅವರ ಮಟ್ಟವನ್ನು ಗುರುತಿಸಬಹುದಾಗಿದೆ. ವಿನಯ ವಿವೇಕವನ್ನು ತರುತ್ತದೆ, ಸದ್ಗುಣಗಳನ್ನು ಕಾಪಾಡಿಕೊಂಡು ಬರುತ್ತದೆ. ಅಂತೆಯೆ 'ದೇವುಡು' ಅವರು ಸಂಸ್ಕೃತಿಗೆ 'ವಿನಯ' ಎನ್ನುವುದೇ ಸರಿ ಎಂದಿರುವುದು.

ನಿಸರ್ಗ ಮನುಷ್ಯನಿಗೆ ನಾನಾ ರೂಪಗಳಲ್ಲಿ ಸಹಕರಿಸುವಂತೆ ಸಂಸ್ಕೃತಿಯನೇ ನೀಡಿ ಉಪಕರಿಸುತ್ತದೆ. ಸಂಸ್ಕೃತಿ ಕಾಣಿಸಿಕೊಂಡದ್ದು ಪ್ರಕೃತಿಯಲ್ಲಿ, ಅದು ಕಳೆಗೊಂಡದ್ದು ಪ್ರಕೃತಿಯಲ್ಲಿ ಪ್ರಕೃತಿಯ ಕಾಯಿಯು ಸಂಸ್ಕೃತಿಯ ಹಣ್ಣಾಗಬೇಕಾಗಿದೆ ಕಾಯಿಯ ಹಸಿರು ಹಳದಿಯಾಗಿ ಮಾರ್ಪಾಡುವುದನ್ನು ಅದರ ಕಠಿಣ ಮಾರ್ಗವಾಗಿ ಬದಲಿಸುವುದನ್ನು ಅದರ ಹುಳಿಕಹಿಗಳು ತಮ್ಮ ಮುಖ್ಯ ಸಮಸ್ಯೆಗಳಿಗೆ ಕಾಣಬಯಸುವ ಅಂತರಂಗದ ಸಾಧನೆಯೇ ಸಂಸ್ಕೃತಿಯಾಗಿದೆ.

ಸಂಸ್ಕೃತಿ ಮನಸ್ಸಿನ ಪಕ್ವತೆ ,ನಾಗರಿಕತೆಯ ಬೌದ್ಧಿಕ ಸಾಧನೆ, 'ಸಂಸ್ಕೃತಿ' ಅನುಭವಿಸಿ ಅರಿಯುವಂತಹುದು, ಯಾರಿಗೂ ನೋವಾಗದ ಶುಭ ಹಾರೈಸುವ ಮಾತುಗಳೇ ಸಂಸ್ಕೃತಿಯ ಪಡಿಯಚ್ಚುಗಳಾಗಿ ಕಂಗೊಳಿಸುವುವು. ಅಂಥವನ ನಡೆ ನುಡಿಗಳಲ್ಲೂ ಸಂಸ್ಕೃತಿಯ ಕೆಚ್ಚು ಮೂಡುವುದು. ನಡೆ ನುಡಿಗಳ ಚೊಕ್ಕಟವೇ ಸಂಸ್ಕೃತಿ, ಚೊಕ್ಕಟವೆಂದರೆ

ಮನಸ್ಸಿನ ಕೊಳಕನ್ನು ಕಳೆದು ಹಾಕುವುದು ಎಂದರ್ಥ. ಆದುದರಿಂದ ಸಂಸ್ಕೃತಿಯು ಮನಸ್ಸನ್ನು ತೊಳೆದು ಶುಚಿ ಮಾಡುವುದು. ಅಂತರಂಗದ ಆಳಕ್ಕೆ ಇಳಿದು ನಮ್ಮನ್ನು ನಾವು ಚಿಂತನ ಮಂಥನ ಶೋಧನದ ಒರೆಗಲ್ಲಿಗೆ ಹಚ್ಚಿ ಪರಿಚಯಿಸಿಕೊಳ್ಳಬೇಕಾಗುತ್ತದೆ. ಹೃದಯದಿಂದ ಬಂದು ಸಹಜವಾಗಿ ಬಹಿರಂಗದಲ್ಲಿ ವ್ಯಕ್ತವಾಗಲೇಬೇಕು. ಮನುಷ್ಯನ ಆಂತರಿಕ ಗುಣ ಮೌಲ್ಯಗಳ ಚಿತ್ರ ದೊರಕಿಸುವುದು ಇದರ ಪರಮ ಗುರಿ. ಒಳ್ಳೆಯ ತನದಿಂದ ಇರುವ ಮನುಷ್ಯ ಇದನ್ನು ಪಡೆದುಕೊಂಡಿದ್ದಾದರೂ ಅವನಿಗಿಂತಲೂ ಮೇಲ್ಮಟ್ಟದಲ್ಲಿ ನಿಲ್ಲುವಂತಹದು ಸಂಸ್ಕೃತಿ.

ಮಾನವರು ಒಂದು ಸ್ಥಳದಲ್ಲಿ ಒಂದಾಗಿ ಜೀವಿಸುತ್ತಿರುವಾಗ ಅವರಲ್ಲಿ ಇರುವ ಕಲೆಗಳು ಹೊರಬರುವವು. ಸಂಪ್ರದಾಯ ಪದ್ಧತಿಗಳಲ್ಲಿ ಸ್ವಭಾವ ಧರ್ಮಗಳಲ್ಲಿ, ಆಚಾರ-ವಿಚಾರ ಒಳ್ಳೆಯ ಗುಣ ಉತ್ತಮವಾದ ನಡತೆ, ಸಂಸ್ಕೃತಿ, ತತ್ವಜ್ಞಾನ ಸಾಹಿತ್ಯ, ನಾಟಕ ಸಂಗೀತ, ಶಿಕ್ಷಣ, ಆಹಾರ-ವಿಹಾರ, ಹಬ್ಬ-ಹರಿದಿನಗಳಲ್ಲಿ ದೇವರ ಗುಡಿ ಗುಂಡಾರ ಮುಂತಾದವುಗಳಾಗುವವು.

ನಮ್ಮ ಕಣ್ಣಿಗೆ ಕಾಣುವ ನಿತ್ಯ ಸತ್ಯ ವಸ್ತುಗಳಲೆಲ್ಲಾ ಅದರ ಚಿಹ್ನೆಗಳನ್ನು ಕಾಣುತ್ತೇವೆ. ಇವುಗಳಲ್ಲಿಯ ಯಾವುದೋ ಒಂದು ಪ್ರಕಾರವನ್ನು ತೆಗೆದುಕೊಂಡು ಇದೇ ಸಂಸ್ಕೃತಿ ಎಂದು ಹೇಳುವ ಹಾಗಿಲ್ಲ.

ಗುರುವಿನಿಂದ ಶಿಷ್ಯ, ತಂದೆ-ತಾಯಿಗಳಿಂದ ಮಕ್ಕಳು ಹಿರಿಯ ಕಿರಿಯರು ಅನುಕರಿಸಿ ಕಲಿಯುತ್ತಾರೆ. ಇವರು ಮುಂದಿನವರಿಗೆ ಮಾರ್ಗದರ್ಶಕರಾಗುತ್ತಾರೆ. ತಮ್ಮಲ್ಲಿ ಇರುವ ಹಳೆಯದರ ಜೊತೆಗೆ ಹೊಸದನ್ನು ಕೂಡಿಸಿಕೊಂಡು ಬದಲಾವಣೆ ಹೊಂದುತ್ತ ಮುಂದಿನ ತಲೆಮಾರಿನ ಜನಾಂಗದ ಸಂಸ್ಕೃತಿಯ ಅನುಭವ ಆಧುನಿಕ ಪೀಳಿಗೆಗೆ ಮಾದರಿಯಾಗುವುದು. ಸಮಾಜದ ಪ್ರತಿಯೊಂದು ವರ್ಗಕ್ಕೂ ಗುಂಪಿಗೂ ತನ್ನದೇಯಾದ ಒಂದು ಸಂಸ್ಕೃತಿ ಇದ್ದೆ ಇದೆ ಪ್ರಾಚೀನ ಸಂಸ್ಕೃತಿಯ ತಾಯಿ ಬೇರಿನಲ್ಲಿಯೂ ಅರಳುತ್ತಿರುವ ಕುಸುಮಗಳು ನಾವು ಹೂಫಲ ಕೊಡುವ ಸಂಸ್ಕೃತಿ ಸಮೃದಾಗಬೇಕಾದರೆ ಮೂಲತಾಯಿ ಬೇರಿನ ಸಂರಕ್ಷಣೆಯಾಗಬೇಕು.

ಧರ್ಮ ಸಂಸ್ಕೃತಿಯ ಜೀವ ಜೀವಾಳ. ಅದು ಮನುಷ್ಯನ ಸರಿತಪ್ಪುಗಳ ವಿಮರ್ಶೆ ಮಾಡುತ್ತದೆ. ಒಳ್ಳೆಯವನಾಗುವಂತೆ ಪ್ರೇರೇಪಿಸುತ್ತದೆ. ಆಂತರಿಕ ಗುಣಗಳಿಗೆ ಬೆಲೆ ನೀಡಿ ಅದು ಮಾನವೀಯ ಮೌಲ್ಯಗಳಿಗೆ ಒಳ್ಳೆಯ ಗುಣ ನೀಡಿ, ಅದರ ವಿದ್ಯೆಯನ್ನು ಕಲಿಸಿಕೊಡುತ್ತದೆ. ಧರ್ಮದ ನಿರ್ಮಾಣಕ್ಕೆ ಪ್ರಬಲ ಸಾಧನವಾಗಿದೆ. ಚಾರಿತ್ರಿಕ ನಡತೆಯನ್ನು ರೂಪಿಸುವಲ್ಲಿ ಅದು ಪ್ರಮುಖ ಪಾತ್ರವಹಿಸುತ್ತದೆ. ಈ ಹಿನ್ನೆಲೆಯಲ್ಲಿ ದೇವಸ್ಥಾನಗಳು ಗ್ರಾಮಗಳಲ್ಲಿ ಸಂಸ್ಕೃತಿಯ ಕೇಂದ್ರಗಳಾಗಿವೆ ಎಂಬುದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

**೩.೨ ದೇವಾಲಯಗಳ ಹುಟ್ಟು ಮತ್ತು ಬೆಳವಣಿಗೆ :**

"ದೇವಾಲಯ ಬರಿ ಕಟ್ಟಿದ ಕಟ್ಟಡ ಮಾತ್ರವಾಗಿರದೇ ಸಾಮೂಹಿಕ ಪೂಜೆ ಪ್ರಾರ್ಥನೆಗಳನ್ನು ಸಲ್ಲಿಸಲು ವಿಶಿಷ್ಟ ತಾಣವಾಗಿದೆ. ಪ್ರತಿಯೊಂದು ಧರ್ಮದಲ್ಲಿಯೂ ಆಯಾ ದೇವಾಲಯಕ್ಕೆ ವಿಶಿಷ್ಟ ಸ್ಥಾನವಿದೆ". ದೇವಾಸ್ಥಾನಗಳು ಮಾನವ ಜನ ಜೀವನದ ಅವಿಭಾಜ್ಯ ಅಂಗವಾಗಿದೆ. ಈ ಜಗತ್ತಿನ ಸೃಷ್ಟಿಕರ್ತ ದೇವರು, ದೇವರು ನಿರಾಕಾರನಾಗಿದ್ದರೂ ಸೃಷ್ಟಿ ನಿರ್ಮಾಣವಾಗಿರುವುದರಿಂದ ಅದರ ಕುರುಹಾಗಿ ಮೂರ್ತಿ ಸ್ಥಾಪಿಸಿ, ಕೃತಜ್ಞತೆ ಸಲ್ಲಿಸುವುದು, ಪ್ರತಿಯೊಬ್ಬ ಜೀವಿಯ ಆದ್ಯ ಕರ್ತವ್ಯವಾಗಿದೆ. ದೇವಾಲಯ ದೇವಸ್ಥಾನ ದೇವಾಯತನ ಪ್ರಾಸಾದ, ವಿಮಾನ, ತೀರ್ಥ ಇತ್ಯಾದಿ ನಾಮಧೇಯಗಳಿಂದ ದೇವಾಲಯವನ್ನು ಗುರುತಿಸಲಾಗಿದೆ" [೩]

ಸೃಷ್ಠಿಯ ಪ್ರಾರಂಭದಲ್ಲಿ ಮನುಷ್ಯ ಅಲೆಮಾರಿಯಾಗಿದ್ದನು. ಅವನ ಬದುಕಿಗೆ ನಿರ್ಧಿಷ್ಟ ನೆಲೆ ಬೆಲೆಗಳಿರಲಿಲ್ಲ. ನಿಸರ್ಗ ಪ್ರಕೋಪಗಳಿಂದ ಮನುಷ್ಯನ ಬದುಕಿಗೆ ಗಂಡಾಂತರ ಇರುವುದು ಎಂಬ ಅರಿವು ಕ್ರಮೇಣ ಅವನಿಗುಂಟಾಯಿತು. ದುಷ್ಟ ಶಕ್ತಿಗಳೊಡನೆ ಹೋರಾಟದ ಅನಿವಾರ್ಯತೆ ಅವನಿಗೆ ಎದುರಾಯಿತು.

ಹೀಗಾಗಿ ಪ್ರಕೃತಿ ವಿಸ್ಮಯಕ್ಕೆ ಬೆರಗಾಗಿ ಭಯದಿಂದ ಪೂಜಿಸಲು ಪ್ರಾರಂಭಿಸಿದರು. ಆ ವಸ್ತುಗಳಿಗೆ ಆಹಾರ ರೂಪ ನೆಲೆ ಇತ್ಯಾದಿಗಳನ್ನು ಕಲ್ಪಿಸಿದರು. ಮನುಷ್ಯನಲ್ಲಿರುವ ಭಯವೇ ದೇವರ ಪರಿಕಲ್ಪನೆಗೆ ಕಾರಣವಾಯಿತು. ಅವ್ಯಕ್ತವಾದ ಪ್ರಕೃತಿಯ ಶಕ್ತಿಗೆ 'ದೇವರು' ಎಂಬ ಹೆಸರು ಇಟ್ಟು ಅದಕ್ಕೆ ಸಾಕಾರ ರೂಪ ಕಲ್ಪಿಸಿ ಪೂಜಿಸಲು ಪ್ರಾರಂಭಿಸಲು ಇಲ್ಲಿ ದೇವರ ಕಲ್ಪನೆ ಬೀಜಾಂಕುರವಾಯಿತು." [೪] ಎಂಬ ನುಡಿಗಳು ದೇವರ ಕುರಿತಾದ ವಿಚಾರಣೀಯ ವಾದವಾಗಿದೆ.

ಧರ್ಮದ ಮೂಲ ಸಂಸ್ಕೃತಿಯಿದ್ದಂತೆ, ವಿಶಿಷ್ಟತೆಯನ್ನು ಗುರುತಿಸಿ ಕೊಂಡಿರುವ ಉನ್ನತ ಪರಂಪರೆಯ ಸ್ಮಾರಕಗಳು ದೇವಾಲಯಗಳಾಗಿವೆ. ನದಿದಂಡೆ, ಗುಡ್ಡ, ಬೆಟ್ಟ, ಅರಣ್ಯ ಪ್ರದೇಶಗಳಲ್ಲದೇ ಊರಿನ ಮಧ್ಯದಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ ದೇವಾಲಯಗಳು ಕಂಡುಬರುತ್ತವೆ. ದೇವಾಲಯದ ಪರಿಕಲ್ಪನೆ ಮನುಷ್ಯನಲ್ಲಿ ಮೂಡಿರುವುದು ತುಂಬಾ ವಿಶಿಷ್ಟವಾಗಿದೆ. ಕಾಡಿನಿಂದ–ನಾಡಿಗೆ ಬಂದ ಮಾನವ ನಾಗರೀಕತೆ ಬೆಳೆದಂತೆ ಆತನ ಆಲೋಚನೆಗಳು ಬೆಳೆದು ನಿಸರ್ಗದ ಎಲ್ಲಾ ವಸ್ತುಗಳಲ್ಲಿ ದೇವರ ಸ್ವರೂಪ ಕಂಡುಕೊಂಡನು. ಸೃಷ್ಟಿಯ ರಹಸ್ಯ ಅಗಾಧತೆಯ ಆ ಶಕ್ತಿಗೆ ರೂಪ ಕೊಟ್ಟು ಅದರ ಸಂರಕ್ಷಣೆಗೆ ಆಲಯವನ್ನು ನಿರ್ಮಿಸಲಾಗಿದೆ. ಇದು ದೇವಾಲಯದ ನಿರ್ಮಾಣಕ್ಕೆ ನಾಂದಿಯಾಯಿತು ಎಂದು ಹೇಳಲಾಗಿದೆ" [೫]

"ದೇವಾಲಯವು ಮಾನವನ ಸಂಸ್ಕೃತಿಯ ಮಹಾವಿಷ್ಕಾರಗಳಲ್ಲೊಂದಾಗಿದೆ. ದೇವಾಲಯ ಕಟ್ಟಿದ ನಿರುಕ್ತಿಯನ್ನು ಗಮನಿಸಿದಾಗ ದೇವರ ಮನೆ, ನಿಲಯ ಎಂದು ಅರ್ಥವಾಗುತ್ತದೆ. ದೇವ ಶಬ್ದಕ್ಕೆ ಲೀಲೆ, ಗೆಲ್ಮೆ, ವ್ಯವಹಾರ, ಬೆಳಕು, ಸ್ತುತಿ, ಆನಂದ ಆಮೋದ ಕನಸು ಚೆಲುವು ಹೀಗೆ ನಾನಾರ್ಥಗಳುಂಟು.

ತಮಿಳು ತೆಲುಗು, ನುಡಿಗಳಲ್ಲಿರುವ ಕೋವಿಲ್ ಶಬ್ದವು ದೇವಾಲಯ ವಾಚಕವಾಗಿದೆ. ಭಾರತೀಯ ಭಾಷೆಗಳಲ್ಲಿ ದೇವಾಲಯಕ್ಕಿರುವ ವಾಚಕಗಳು ದೇವ ಮಂದಿರ, ದೇವನಿಲಯ, ದೇವಕೇತನ ಇತ್ಯಾದಿ ದಿವ್ಯತ್ವದ ನೆಲೆಗಳೆಂದೇ ಕರೆಯುತ್ತಾರೆ".[೬]

ಧರ್ಮದ ಬೆನ್ನೆಲುಬಾಗಿರುವ ದೇವಾಲಯಗಳು ಹರಪ್ಪ ಮತ್ತು ಮಹೆಂಜೋದಾರೋ ಸಂಸ್ಕೃತಿಯಲ್ಲಿಯೇ ದೇವಾಲಯಗಳ ಅವಶೇಷಗಳನ್ನು ಕಾಣಬಹುದಾಗಿದೆ. ದೇವಾಲಯಗಳು ಊರೊಪ್ಪಿನ ಸಾಂಸ್ಕೃತಿಕ ಕೇಂದ್ರಗಳಾಗಿದ್ದು ಪರಂಪರಾಗತ ಸಂಸ್ಕೃತಿಯ ಸಂವರ್ಧನೆಗೆ ಕಾರಣಿಭೂತವಾಗಿದೆ.

Temple ಎಂಬ ಆಂಗ್ಲ ಭಾಷಾಪದದ ಮೂಲವಾದ ಲ್ಯಾಟಿನ ಶಬ್ದ Templum ಇದು ಮೂಲತ: ಆರಾಧನೆ ಪದ್ಧತಿಯ ನೆಲೆಯಾದ ವೇದಿಕೆಯಾಗಿತ್ತು. ಚತುರಸಾಕಾರದ ಈ ವೇದಿಕೆಯ ಮೇಲೆ ಭಗವತಾರಾಧನೆ, ಅರ್ಪಣೆ ಮಾಡುತ್ತಿದ್ದರಲ್ಲದೆ ಪ್ರಾರ್ಥಾನಾರ್ಚಕರು ಇದರ ಮೇಲೆ ನಿಂತು ಪೂಜಿಸುತ್ತಿದ್ದರು.

ಗ್ರೀಕ್ ರೋಮನ ಹಾಗೂ ಮಿನೋವನ ಸಂಸ್ಕೃತಿಗಳಲ್ಲಿ ಸುವೇದ್ಯವಾಗಿದೆ. ಇಂಗ್ಲೀಷನಲ್ಲಿ ಕೆನ್ನೆಯ ಮೇಲಣ, ಹಣೆಯ ಇಕ್ಕೆಲದ ಮೂಳೆ ಭಾಗವನ್ನು Temple bone ಎಂದು ಕರೆಯುತ್ತಾರೆ. ಇದು ಪ್ರಸ್ತುತ ದೇಹದಲ್ಲಿ ದೇವಾಲಯವನ್ನು ಗುರುತಿಸಿಕೊಳ್ಳುವ ಆಧ್ಯಾತ್ಮಿಕ ಪ್ರಕ್ರಿಯೆಯೂ ಕೂಡಾ ಆಗಿದೆ". ಅದಕ್ಕಾಗಿಯೇ ನಾಡಿನ ಹಲವೆಡೆ ನಿರ್ಮಿಸಿಕೊಂಡ ವೇದಿಕೆಗಳೇ ದೇವಾಲಯಗಳಾಗಿವೆ. ದೇವಾಲಯಗಳು ಸರ್ವ ಜನರ ಆರಾಧನೆಗೆ ಪಾತ್ರವಾಗಿದ್ದು, ತನ್ನದೆ ಆದ ಚರಿತ್ರೆಯನ್ನು ಹೊಂದಿರುತ್ತದೆ. ಇವು ಸಾರ್ವಜನಿಕ ಪೂಜೆಗೆ ಮುಕ್ತದ್ವಾರಗಳಾಗಿವೆ"[೭]

**ಅ) ದೇವಾಲಯಗಳ ಪ್ರಾಚೀನತೆ :**

ವಿಗ್ರಹಾರಾಧನೆ ಪದ್ಧತಿ ಮತ್ತು ದೇವಾಲಯ ನಿರ್ಮಾಣ ರಾಮಾಯಣ ಮತ್ತು ಮಹಾಭಾರತ ಕಾಲದಿಂದಲೂ ಆರಂಭವಾಗಿರಬಹುದು ವೇದಗಳ ಕಾಲದಲ್ಲಿಯೂ ದೇವಾಲಯಗಳ ಉಲ್ಲೇಖವಿದೆ. ಸಿಂಧೂ ನದಿ ನಾಗರೀಕತೆಗಳ ದೇವಾಲಯಗಳು ಪ್ರಾಚೀನತೆಗೆ ಸಾಕ್ಷಿಯಾಗಿವೆ. ವೈದಿಕರು ಯಜ್ಞ ಯಾಗಾದಿಗಳನ್ನು ಮಾಡುತ್ತಿದ್ದರು. ಯಾಗ ಶಾಲೆಗಳೇ ಕ್ರಮೇಣ ಭಕ್ತಿ ಪಂಥಗಳ ಪ್ರಭಾವದಿಂದಾಗಿ ದೇವಾಲಯಗಳಾಗಿ ರೂಪಾಂತರ ಹೊಂದಿವೆಯೆಂದು ಹೇಳಬಹುದು.

ಪ್ರಾಚೀನ ಕಾಲದಲ್ಲಿ ಮಣ್ಣಿನಿಂದ, ಮರದಿಂದ, ಇಟ್ಟಿಗೆಗಳಿಂದ ದೇವಾಲಯಗಳನ್ನು ನಿರ್ಮಿಸುತ್ತಿದ್ದರು, ಅವು ಕಾಲದ ದವಡೆಯಲ್ಲಿ ನಶಿಸಿ ಹೋಗಿರಬಹುದು. ಅಶೋಕನ ಕಾಲದಲ್ಲಿ ಏಕಶಿಲಾ ಸ್ತಂಭಗಳು ಗೋಪುರದ ತುದಿಯಲ್ಲಿ ಸಿಂಹಗಳು ಧರ್ಮ ಸಂದೇಶವನ್ನು ಸಾರುತ್ತಿರುವಂತೆ ಕಂಗೊಳಿಸಿದವು. ಹಿಂದೂ ಧರ್ಮದಲ್ಲಿ ಮೂರ್ತಿ ಪೂಜೆ, ಪ್ರಕೃತಿ ಶಕ್ತಿಗಳ ಆಹ್ವಾನ ಮತ್ತು ದೇವರಿಗೆ ಅರ್ಪಿಸುವ ಆಚರಣೆಗಳು ಪ್ರಮುಖವಾಗಿದ್ದವು ಹರಪ್ಪ ಮತ್ತು ಮೊಹೆಂಜೋದಾರೋ ಸಂಸ್ಕೃತಿಯಲ್ಲಿ ಲಿಂಗದ ಅವಶೇಷಗಳನ್ನು ಕಾಣಬಹುದಾಗಿದೆ"[೮]

ಕ್ರಿ.ಶ. 2ನೇ ಶತಮಾನದ ಕಾಲಕ್ಕೆ ದೇವಾಲಯಗಳ ನಿರ್ಮಾಣವಾಗಿದ್ದವು. ದೇವಾಲಯದ ವಾಸ್ತು ಶಿಲ್ಪ, ವೇದಕಾಲದಿಂದಲೂ ಪ್ರಾಮುಖ್ಯತೆ ಪಡೆದಿದೆ. ಬಿ.ರಾಘವೇಂದ್ರರಾಯರ್ ಲೇಖನದ ಪ್ರಕಾರ" ಸೃಷ್ಟಿಯ ಪ್ರಗತಿಯ ಸಂಕೇತವಾಗಿ ವೃಕ್ಷ, ಅವನತಿ ನಾಶದ ಸಂಕೇತವಾಗಿ ನಾಗ, ಹುಟ್ಟು ಸಾವುಗಳ ಸಂಕೇತವಾಗಿ ಲಿಂಗ ಪೂಜಿಸಲ್ಪಟ್ಟವು. ದೇವಾಲಯದ ಕಟ್ಟಡಗಳು ತಮ್ಮ ಮನೆ–ಮಠಗಳಿಗಿಂತ ಶ್ವಾಶತವಾಗಿ ಉಳಿಯಬೇಕೆಂಬ ಅಪೇಕ್ಷೆಯಿಂದ ಗುಹಾಲಯ ಚೈತ್ಯಾಲಯ ಸ್ತೂಪ ಮತ್ತು ದೇವಾಲಯಗಳನ್ನು ಎರಡು ಸಾವಿರ ವರ್ಷಗಳಿಂದಲೂ ಕಟ್ಟುತ್ತಾ ಬಂದಿರುವುದು ದೇವಾಲಯಗಳ ಪ್ರಾಚೀನತೆಗೆ ಸಾಕ್ಷಿಯಾಗಿದೆ.

## ಆ) ದೇವಾಲಯ ನಿರ್ಮಾಣದ ಉದ್ದೇಶ ಮತ್ತು ಪಾತ್ರ:

ಗುಲಬರ್ಗಾ ಜಿಲ್ಲೆಯ ಸನ್ನತಿ ಕ್ರಿ.ಶ. 2ನೇ ಶತಮಾನದ ವೇಳೆಗಾಗಲೇ ಬೌದ್ಧರ ಮುಖ್ಯ ನೆಲೆಯಾಗಿತ್ತು. ಇಲ್ಲಿಯ ಶಾಸನಗಳು, ಹಲವಾರು ಬೌದ್ಧ ಸ್ತೂಪ, ಜೈತ್ಯಾಲಯ, ಜೈನ ವಿಹಾರ, ಬಸದಿಗಳು ಇತ್ಯಾದಿ ಅವಶೇಷಗಳನ್ನು ಕಾಣಬಹುದಾಗಿದೆ. ತಟಾಕ ದೇವಾಲಯಗಳು ಹಾಗೂ ನಾಗ ಪ್ರತಿಮೆಗಳ ಪ್ರತಿಷ್ಠಾಪನೆಯಿಂದ ಆ ಕಾಲದ ಜನತೆಯ ಸಾಂಘಿಕ ಸಾಂಸ್ಕೃತಿಕ ಬದುಕಿನ ಪರಿಚಯವಾಗುತ್ತದೆ. ಕರ್ನಾಟಕದ ಐಹೊಳೆ ಮತ್ತು ಪಟ್ಟದಕಲ್ಲು ಆಂಧ್ರಪ್ರದೇಶದ ಆಲಂಪುರಗಳಲ್ಲಿರುವ ದೇವಾಲಯಗಳು ಬಾದಾಮಿ ಚಾಲುಕ್ಯರ ಕಾಲದ ದೇವಾಲಯ ನಿರ್ಮಾಣದ ಪ್ರಯೋಗ ಶಾಲೆಯಾಗಿವೆಯೆಂದು ಹೇಳಬಹುದು.[೯]

ಬಹುತೇಕ ದೇವಾಲಯಗಳು ನಾಶವಾಗುವ ಹಂತದಲ್ಲಿರುವಾಗ ಅವುಗಳನ್ನು ಕಲ್ಲಿನಿಂದ ಪುನರ್ ನಿರ್ಮಾಣ ಮಾಡಿದ ಉಲ್ಲೇಖಗಳಿವೆ. ರಾಜ ಮಾಂಡಲಿಕರು, ಅಧಿಕಾರಿಗಳು, ಗಾವುಂಡರು ಸೇರಿ ದೇವಾಲಯಗಳ ನಿರ್ಮಾಣದಲ್ಲಿ ಬಹು ಮಹತ್ವದ ಪಾತ್ರವಹಿಸಿದ್ದರು. ರೋಗ ರುಜಿನಗಳಿಂದ ಬಳಲುವ ಭಕ್ತರು ತಮ್ಮ ಕಾಯಿಲೆ ಗುಣ ಮುಖವಾಗುವಂತೆ ಪೂಜೆ ಪುನಸ್ಕಾರ ಮಾಡಿ ಹರಕೆ ಹೊರವುದುಂಟು ದೇವಾಲಯಗಳು ಸ್ಥಳೀಯ ಸಂಸ್ಕೃತಿಯ ಪ್ರತೀಕವಾಗಿದೆ. ಸ್ಥಳೀಯ ಕಲೆ ಸ್ಥಳೀಯ ಕಲಾವಿದರಿಗೆ ಕುಸ್ತಿ ಪುಟಗಳಿಗೆ, ಬಯಲಾಟಕ್ಕೆ ಗರಡಿ ಮನೆಗಳಾಗಿವೆ. ಹೀಗಾಗಿ ದೇವಾಲಯಗಳು ಸಾಮೂಹಿಕ ಜೀವನದ ಅವಿಭಾಜ್ಯ ಅಂಗಗಳಾಗಿವೆ.

"ದೇವಾಲಯ ನಿರ್ಮಾಣಕ್ಕೆ ಆಯಾ ಧರ್ಮಗಳೇ ಬೆನ್ನೆಲುಬಾಗಿವೆಯೆಂದು ಹೇಳಬಹುದು. ಧರ್ಮ ಕಥಾ ಪ್ರಸಂಗಗಳನ್ನು ಕೇಳಿ ಆಕರ್ಷಿತವಾಗಿ ಧರ್ಮ ಚಿತ್ತದಿಂದ ಲಿಂಗ ಪ್ರತಿಷ್ಠಾಪನೆ ಮಾಡಿಸಿರುವುದು ಕಂಡು ಬರುತ್ತದೆ".[೧೦]

ದೇವರು ಸುಂದರ, ಸೌಂದರ್ಯಪ್ರಿಯ ಸೌಂದರ್ಯಪಾಸಕ, ಶಿಲ್ಪಕಲೆ ಅರಳಿ ಸೌರಭ ಸೂಸಿರುವುದು ದೇವಾಲಯಗಳಲ್ಲಿ ಹೀಗಾಗಿ ಶಿಲ್ಪ ಮತ್ತು ವಾಸ್ತು ಶಿಲ್ಪ ದೇವಾಲಯಗಳೇ ಮೂಲ ಪ್ರೇರಣೆಯಾಗಿದೆಯೆಂದು ಹೇಳಬಹುದು. ಇಡೀ ಗ್ರಾಮೀಣ ಸಮುದಾಯವೆ ದೇವಾಲಯ ನಿರ್ಮಾಣದಲ್ಲಿ ಪಾಲ್ಗೊಂಡಿರುವ ಅನೇಕ ನಿದರ್ಶನಗಳಿವೆ. ದೇವಾಲಯಗಳು ಆಯ ಪ್ರದೇಶದ ಆಂತರಿಕ ಸಂಸ್ಕೃತಿಯನ್ನು ಪ್ರತಿ ಬಿಂಬಿಸುತ್ತವೆ. ದೇವಾಲಯಗಳು ಧಾರ್ಮಿಕ

ಕೇಂದ್ರಗಳಾಗಿದ್ದು, ಸಾಮಾಜಿಕ ನಿಯಂತ್ರಣದ ಅಸ್ತ್ರಗಳಾಗಿವೆ, ಅಲ್ಲಿ ಜರುಗುವ ಪುರಾಣ, ಪ್ರವಚನಗಳು ಇಡೀ ಸಮಾಜವನ್ನು ನಿಯಂತ್ರಿಸುತ್ತವೆ. ಹೀಗಾಗಿ ಪಾಪ-ಪುಣ್ಯಗಳ ಕಲ್ಪನೆ ಇಂದಿಗೂ ಹಚ್ಚಹಸುರಾಗಿ ಉಳಿದಿದೆ.

ಲಿಂಗ ಪ್ರತಿಷ್ಠಾಪನೆಯ ಮಹಾತ್ಮೆಯನ್ನು ಕೇಳಿ, ಧರ್ಮ ಕಾರ್ಯ ಮಾಡಿದವನಿಗೆ ಅಕ್ಷಯ ಪದವಿ ಲಭಿಸುತ್ತದೆಯೆಂಬ ನಂಬಿಕೆಯಿಂದ ದೇವಾಲಯಗಳು ನಿರ್ಮಾಣವಾಗಿವೆ. ಅವುಗಳ ಪಾಲನೆ ಪೋಷಣೆಗಾಗಿ ಅನೇಕ ದಾನ ದತ್ತಿಗಳನ್ನು ನೀಡಲಾಗಿದೆ.ದೇವಾಲಯ ನಿರ್ಮಾಣದಿಂದ ಅನೇಕ ದಾನ ದತ್ತಿಗಳನ್ನು ನೀಡಲಾಗಿದೆ. ದೇವಾಲಯ ನಿರ್ಮಾಣದಿಂದ ದೀನ-ದಲಿತರಿಗೆ ಅನಾಥರಿಗೆ, ನಿರ್ಗತಿಕರಿಗೆ ದಾನ ನೀಡುವುದರಿಂದ ವಯಸ್ಸು ಕೀರ್ತಿ-ಪುಣ್ಯ ದೊರೆಯುವುದೆಂಬ ನಂಬಿಕೆಯಿದೆ. ಊರನ್ನು ಕಟ್ಟಿಸಿದಾಗ ಊರ ಮುಂದೆ ದೇವಾಲಯ, ಕೆರೆ, ಬಾವಿಗಳ ನಿರ್ಮಾಣ ನಡೆದಿದೆ. ಹಸುಗೂಸಿಗೆ ಹಾಲು, ಹಸಿದವರಿಗೆ ಅನ್ನ ನೀಡುವ ಕಾರ್ಯ ನಿರಂತರ ನಡೆಯಬೇಕೆಂಬ ಉದ್ದೇಶದಿಂದ ಕೆರೆಗಳ ಮತ್ತು ಅರವಟ್ಟಿಗೆಗಳ ಕಾರ್ಯ ನಡೆಯುತ್ತಿದ್ದವು. ಸಾಂಸ್ಕೃತಿಕ ಸಂಪರ್ಕ ಹಾಗೂ ಸಂಘನೆಗಳಿಗೆ ದೇವಾಲಯಗಳು ಪ್ರಮುಖ ಕಾರಣವಾಗಿವೆಯೆಂದು ಹೇಳಬಹುದು".[೧೧]

ಪ್ರತಿಯೊಂದು ಊರಿಗೆ ದೇವಾಸ್ಥಾನವೇ ಕೇಂದ್ರಬಿಂದುವಾಗಿದ್ದು, ಊರಿನ ಸಮಗ್ರ ಸಾಂಸ್ಕೃತಿಕ ವಿಕಾಸಕ್ಕೆ ಕಾರಣೀಭೂತವಾಗಿವೆಯೆಂದು ಹೇಳಬಹುದು. ದೇವಾಲಯಗಳು ಜನ ಸಾಮಾನ್ಯರ ಬದುಕಿನ ಹಲವು ಮುಖಗಳನ್ನು ಸಾಮೂಹಿಕವಾಗಿ ನಿಯಂತ್ರಿಸುತ್ತವೆ. ಗ್ರಾಮೀಣ ಜನತೆಗೆ ಸನ್ನಡತೆಯ ಮಾರ್ಗದರ್ಶನ ನೀಡಿ ಪರಂಪರಗತವಾಗಿ ಸಂಸ್ಕೃತಿಯನ್ನು ಉಳಿಸಿ, ಬೆಳೆಸಿ, ಪೋಷಿಸುವ ಕಾರ್ಯದಲ್ಲಿ ದೇವಾಲಯಗಳ ಪಾತ್ರ ಗುರುತರವಾಗಿದೆ. ಲಲಿತ ಕಲೆಗಳ ಮೂಲ ಉಗಮಕ್ಕೆ ದೇವಾಲಯಗಳೇ ಪ್ರಮುಖ ಕೇಂದ್ರಗಳಾಗಿವೆ. ಇವು ಜನತೆಯ ನ್ಯಾಯಾಲಯವಾಗಿದ್ದು, ಧರ್ಮದ ಮೂಲಕ ಶಿಕ್ಷಣ, ಕಲೆ ಸಂಸ್ಕೃತಿಯ ವಿಕಾಸಕ್ಕೆ ದಾರಿ ದೀಪವಾಗಿವೆಯೆಂದು ಹೇಳಬಹುದು.

ಕರ್ನಾಟಕದಲ್ಲಿ ದೇವಾಲಯಗಳ ರಚನೆಗೆ ಉತ್ತಮ ಪರಂಪರೆಯೇ ಇದೆ. ಹಲವಾರು ಮತ ಧರ್ಮಗಳನ್ನು ಆಶ್ರಯಿಸಿ ಕಟ್ಟಿದ ದೇವಾಲಯಗಳು ಕರ್ನಾಟಕದ ಉದ್ದಗಲಕ್ಕೂ ಹರಡಿಕೊಂಡಿವೆ. "ದೇವಾಲಯ ಪವಿತ್ರವಾದುದ್ದರಿಂದ ಸ್ನಾನಕ್ಕಾಗಿ ಕೊಳ ಚೈತ್ರವೃಕ್ಷ ಬಲಿಪೀಠ, ಧ್ವಜಸ್ಥಂಭ ಯಾಗ ಶಾಲೆ, ಪ್ರಕಾರ ಇತ್ಯಾದಿಗಳನ್ನು ರಚಿಸಲಾಗುತ್ತಿತ್ತು"[೧೨]

ವಾಸ್ತುಶಿಲ್ಪ ಕಲೆಯಲ್ಲಿ ಪ್ರಯೋಗಗಳನ್ನು ಮಾಡಿ ಇನ್ನಿತರೆ ಕಲಾ ಪ್ರಕಾರಗಳಿಗೆ ಆದ್ಯತೆ ನೀಡಿ ಪ್ರೋತ್ಸಾಹಿಸಿರುವುದು ಸಾಂಸ್ಕೃತಿಕ ಮೌಲ್ಯದ ಪ್ರಗತಿಯನ್ನು ಸೂಚಿಸುತ್ತದೆ. ಅಂಗ ಭೋಗ ಜೊತೆಗೆ ರಂಗ ಭೋಗಕ್ಕೆ ಮಹತ್ವ ನೀಡಿ ದೃಶ್ಯ ಮತ್ತು ಶ್ರವಣ ಕಲೆಗೆ ದೇವಾಲಯವೆ ಸ್ಫೂರ್ತಿಯ ಸೆಲೆಯಾಗಿದೆಯೆಂದು ಹೇಳಬಹುದು. ದೇವಾಲಯದ ನಿರ್ಮಾಣದ ಹಿನ್ನಲೆಯಲ್ಲಿ ಧರ್ಮವು ಕಾಣುವುದು ಸ್ವಾಭಾವಿಕವಾಗಿದೆ. ದೇವಾಲಯದ ಪರಿಕಲ್ಪನೆಯಿಂದ ಮನುಷ್ಯ ತನ್ನ ಇತಿಮಿತಿಯನ್ನೆ ಕಂಡುಕೊಂಡಿದ್ದಾನೆ. ಮಾನವ ದೇವಮಾನವಾಗುವುದಕ್ಕೆ ದೇವಾಲಯವೆ ಮೂಲ ಪ್ರೇರಣೆಯಾಗಿದೆ. ಶ್ರೀ ಸಾಮಾನ್ಯರನ್ನು ಆಕರ್ಷಿಸುವುದಕ್ಕೆ

ದೇವಾಲಯದ ನಿರ್ಮಾಣ ಕಲ್ಪಿಸಿರುವ ವಸ್ತು ವಿಷಯಗಳಲೆಲ್ಲಾ ದೇವಾಲಯದ ಕಲ್ಪನೆ ಅನುಪಮವಾಗಿದೆ.

ಸಮಾಜದಲ್ಲಿ ಸಾಂಸ್ಕೃತಿಕ ಬೆಳವಣಿಗೆಗೆ ಕಾರಣವಾದ ದೇವಾಲಯಗಳ ಜೊತೆಗೆ ಕೆರೆ. ಭಾವಿಗಳ ನಿರ್ಮಾಣ ಕಾರ್ಯವು ನಡೆದಿದೆ. ವಸತಿಗೆ ಊರು, ಕೃಷಿಗೆ ತೊರೆ ಸಾರ್ವಜನಿಕ ಹಾಗೂ ಸಾಂಸ್ಕೃತಿಕ ಸಂಪರ್ಕ ಮತ್ತು ಸಂಘಟನೆಗೆ ದೇವಾಲಯಗಳ ನಿರ್ಮಾಣವಾಗಿದೆ.

"ಕ್ರಿ.ಶ. 150ರ ಕದಂಬರ ಪ್ರಾಕೃತ ಶಾಶನದಲ್ಲಿ ರಾಜನೊಬ್ಬ ದೇವರಿಗೆ ದತ್ತಿಯನ್ನು ಬಿಟ್ಟುಕೊಟ್ಟ ವಿಷಯವಿದೆ. ಈ ದೇವಸ್ಥಾನವು ವಾಸಸ್ಥಾನವು ಆಗಿದ್ದಿತ್ತೆಂದು ಶಾನವು ತಿಳಿಸುತ್ತದೆ. 450ರ ತಾಳಗುಂದ ಶಾಸನದಿಂದ ಲಕುಲೀಶ ಪಾಶುಪತ ಸಂಪ್ರದಯ ಶೈವ ಗುರುಗಳಿಂದ ದೇವಾಸ್ಥಾನ ನಿರ್ಮಾಣಕ್ಕೆ ಹೆಚ್ಚಿನ ಪ್ರಚೋದನೆ ದೊರೆತಿರುವಂತೆ ಕಾಣುತ್ತದೆ"[೧೩]

"ದೇವಾಲಯ ಗ್ರಾಮೀಣ ಬದುಕಿನ ಅವಿಭಾಜ್ಯ ಅಂಗವಾಗಿದೆ. ಗ್ರಾಮ ಸಂಸ್ಕೃತಿಯಲ್ಲಿ ಗ್ರಾಮ ದೇವಾಲಯಗಳ ಮೇಲೆ ಅವಲಂಬಿಸಿದೆ. ಹೀಗಾಗಿ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರಬಿಂದು ದೇವಾಲಯಗಳಾಗಿವೆ. ಜನಪದ ಕ್ರಿಯಾತ್ಮಕ ಚಟುವಟಿಕೆಗಳು ದೇವಾಲಯದಿಂದಲೆ ಬೆಳೆದುಕೊಂಡು ಬಂದಿವೆ. ಜನದಪದದ ಸಂಸ್ಕೃತಿ ನದಿ ಮತ್ತು ದೇವಾಲಯಗಳ ಹಿನ್ನಲೆಯಲ್ಲಿಯೇ ಬೆಳೆದುಕೊಂಡು ಬಂದಿವೆ. ಜನಪದದ ಸಮಗ್ರ ಬದುಕನ್ನು ರೂಪಿಸುವಲ್ಲಿ, ಜನಜಾಗೃತಿಗೊಳಿಸುವಲ್ಲಿ ದೇವಾಲಯಗಳು ಬಹು ಮಹತ್ವದ ಪಾತ್ರವಹಿಸಿವೆ. ಇದರಿಂದ ಜನರ ಭಕ್ತಿ, ಶ್ರದ್ಧೆ, ನಿಷ್ಠೆ ಮುಪ್ಪರಿಗೊಂಡಿದ್ದು ಅವರ ಸಮಗ್ರ ವ್ಯಕ್ತಿತ್ವ ವಿಕಾಸಕ್ಕೆ ಕಾರಣವಾಗಿದೆ.

ದೇವಾಲಯಗಳು ಕೇವಲ ಪೂಜಾ ಮಂದಿರಗಳಾಗಿ ಕಾರ್ಯ ನಿರ್ವಹಿಸಿದೆ ಸಾಮಾಜಿಕ ಸಂಸ್ಥೆಗಳಾಗಿ ಕಾರ್ಯ ನಿರ್ವಹಿಸಿವೆ. ವಾಸ್ತುಶಿಲ್ಪ, ಮೂರ್ತಿಶಿಲ್ಪ, ವಿದ್ಯಾಭ್ಯಾಸ, ಸಂಗೀತ, ನೃತ್ಯ ಇತ್ಯಾದಿ ಲಲಿತ ಕಲೆಗಳಿಗೆ ದೇವಾಲಯವೇ ಉಗಮಸ್ಥಾನವಾಗಿವೆ.

ಕೆಲವು ಊರುಗಳಂತು ದೇವಾಲಯಗಳಿಂದಲೇ ಪ್ರಸಿದ್ಧಿ ಪಡೆದಿವೆ. ಜನಪದದ ಶ್ರದ್ಧೆ ಮತ್ತು ನಂಬಿಕೆಗಳಿಂದ ದೇವಾಲಯ ಹೆಚ್ಚು ಮಹತ್ವ ಪಡೆಯುತ್ತದೆ. ದೇವಾಲಯಗಳು ಬದುಕಿನ ಮತ್ತು ಹಲವು ಮುಖಗಳನ್ನು ಸಮುದಾಯಕವಾಗಿ ನಿಯಂತ್ರಿಸುತ್ತಿದ್ದವೆಂಬುದಕ್ಕೆ ಕೆಳಗಿನ ಮಾತು ಸಾಕ್ಷಿಯಾಗಿವೆ.

ಸಮಾಜದ ಎಲ್ಲಾ ವರ್ಗದ ಜನರನ್ನು ಒಂದೇ ವೇದಿಕೆಯ ಮೇಲೆ ತರುವ ಕಾರ್ಯವನ್ನು ದೇವಾಲಯಗಳು ನಿರ್ವಹಿಸುತ್ತಿದ್ದವು. ನಾಡಿನ ಧಾರ್ಮಿಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿ ದೇವಾಲಯಗಳು ಬಹು ಮಹತ್ವ ಪಡೆದಿದೆ. ದೇವಾಲಯ ನಿರ್ಮಾಣದಲ್ಲಿ ಅರಸರು, ಸಾಮಂತರು ಅಧಿಕಾರಿ ವರ್ಗದವರು, ಧರ್ಮಗುರುಗಳು ಆಸಕ್ತಿ ವಹಿಸಿರುವುದು ಕಂಡು ಬರುತ್ತದೆ. ತಾವು ನಂಬಿದ ಧರ್ಮಕನುಗುಣವಾಗಿ ಪುರಾಣ, ಪುಣ್ಯ ಕಥೆಗಳನ್ನು ಹೇಳುವುದು ಮತ್ತು ಕೇಳುವುದು ಪ್ರಬಲವಾಗಿದ್ದ ಶೈವ ಮತ್ತು ದುರ್ಬಲವಾಗಿರುವ ಜೈನ ಧರ್ಮ ಸಂಘರ್ಷಗಳ ನಡುವೆ ಹಲವಾರು ದೇವಾಲಯಗಳು ಮತ್ತು ಬಸದಿಗಳು ನಿರ್ಮಾಣವಾಗಿವೆ"[೧೪]

**ಇ) ದೇವಾಸ್ಥಾನ ನಿರ್ಮಾಣಕ್ಕೆ ಕಾರಣಗಳು :**

ಪ್ರಾಚೀನ ಕರ್ನಾಟಕದ ದೇವಸ್ಥಾನಗಳು ಆ ಜನರ ಭಕ್ತಿ ಮತ್ತು ನಿಷ್ಠೆಗಳ ಪ್ರತೀಕಗಳು, ಈ ಭಕ್ತಿ ಮತ್ತು ನಿಷ್ಠೆಗಳು ನೆಲೆಗೊಂಡಿದ್ದು ಹಲವಾರು ಹೆಸರುಗಳು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತೇವೆ. ಧರ್ಮ ವೊಳಲಿನ ಅಜ್ಜಮಯ್ಯ ಅಥವಾ ಅಜ್ಜಮ ನಾಯಕ ಎಂಬಾತನು ಕನಸಿನಲ್ಲಿ ಮುಕ್ಕಣ್ಣನ ಪಾದಗಳನ್ನು ಕಂಡು "ನಮಃ ಶಿವಾಯ' ಎಂದು ಕನವರಿಸುತ್ತಿದ್ದನಂತೆ. ಆ ಕಾಲದ ಆದರ್ಶವೆ ಇದು. ನ್ಯಾಯವಾದ ರೀತಿಯಲ್ಲಿ ಧನ ಸಂಪಾದನೆ ಮಾಡಬೇಕು. ಆ ಧನವನ್ನು ದಾನಮಾಡಬೇಕು ಅಥವಾ ಅದರ ಸಹಾಯದಿಂದ ದೇವಸ್ಥಾನವನ್ನು ನಿರ್ಮಿಸಬೇಕು. ದೇವಸ್ಥಾನವನ್ನು ನಿರ್ಮಿಸಲು ಹಟ್ಟಿಯನಾಯಕನಿಗೆ ಒದಗಿಬಂದ ದೇವಸ್ಥಾನವನ್ನು ಪ್ರಚೋದನೆಯ ಸಂದರ್ಭವನ್ನು ಒಂದು ಶಾಸನವು ವಿವರಿಸುತ್ತದೆ. ಅವನು ಯಾವುದೋ ಕಥಾ ಗೋಷ್ಠಿಯಲ್ಲಿ ಭಾಗವಹಿಸಿ ಧರ್ಮ ಶ್ರವಣವನ್ನು ಮಾಡುತ್ತಿದ್ದಾನೆ. "ಎಲ್ಲ ಸಂಪತ್ತುಗಳಿಗೂ ಪುಣ್ಯವೇ ಮೊದಲು, ಎಲ್ಲ ಪುಣ್ಯಕ್ಕೂ ಈಶ್ವರ ಪ್ರತಿಷ್ಠೆಯೇ ಮೊಟ್ಟಮೊದಲು, ಈ ಪುಣ್ಯದ ಬಳಿವಿಡಿದು ಎಲ್ಲಾ ಪುಣ್ಯವೂ ಬರುತ್ತದೆ. ವ್ಯಕ್ತಿ ಯಾವ ದೇವತೆಯ ಪ್ರತಿಷ್ಠೆಯನ್ನು ಮಾಡಿಸುವನೋ, ಆ ದೇವತೆಗೆ ಅವನ ಹೆಸರು ಬರುತ್ತದೆ.

**ಈ) ವ್ಯಕ್ತಿಯ ಹೆಸರಿನಲ್ಲಿ ದೇವಸ್ಥಾನ :**

ವ್ಯಕ್ತಿಗೆ ತಂದೆ ತಾಯಿಗಳು ಇಟ್ಟ ಹೆಸರು ಯಾವುದೇ ಆಗಿರಲಿ ಆ ವ್ಯಕ್ತಿ ತನ್ನ ಹೆಸರಿಗೆ ಈಶ್ವರ ಎಂಬ ಪದವನ್ನು, ಭಟ್ಟಾರಕ ಎಂಬ ಪದವನ್ನೊ ಸೇರಿಸಿ ಆ ಹೆಸರಿನ ದೇವರನ್ನು ಪ್ರತಿಷ್ಠಾಪಿಸುವ ಸಂಗತಿಯು ಹಲವು ಶಾಸನಗಳಲ್ಲಿದೆ. ವಿಜಯಾದಿತ್ಯ ಸತ್ಯಾಶ್ರಯನು ಪ್ರತಿಷ್ಠಾಪಿಸಿದ ದೇವರು ವಿಜಯಾದಿತ್ಯ ಭಟ್ಟಾರಕ' ಲೋಕ ಮಹಾದೇವಿಯು ರಚಿಸಿದ ದೇವಸ್ಥಾನ ಲೋಕೇಶ್ವರ ಭಟ್ಟಾರಕ ದೇವಸ್ಥಾನ "ಬುದ್ಧಿರಾಜನು ಮಾಡಿಸಿದ ದೇವರು ಬದ್ದೇಶ್ವರ" ಈಗ ನಮಗೆ ಇವು ಬಹಳ ವಿಚಿತ್ರವಾಗಿ ಕಂಡಿರಬೇಕು. ಆಗ ಬದ್ದೇಶ್ವರ ಈಶ್ವರ, ಆಗ ಕೋಟೆಶ್ವರ ಈಗ ಸೋಮೇಶ್ವರ ಆಗಿ ಕಲ್ಲೇಶ್ವರ ಎಂದರೆ ಪ್ರತಿಷ್ಠಿಪಿಸಿದ ವ್ಯಕ್ತಿಯ ಹೆಸರನ್ನು ಬಿಟ್ಟು ಅದರ ಮುಂದಿನ ಈಶ್ವರ ಎಂಬಷ್ಟನ್ನೇ ಮಾತ್ರ ಈಗ ಉಳಿಸಿಕೊಂಡಿದ್ದಾರೆ.

**ಉ) ದೇವಾಸ್ಥಾನ ನಿರ್ಮಾಣ ಶ್ರದ್ಧೆ, ನಿಷ್ಠೆ :**

ದೇವಸ್ಥಾನ ನಿರ್ಮಾಣ ವಿಷಯದಲ್ಲಿ ಹೆಚ್ಚು ಹುರುಪು ಉತ್ಸಾಹಗಳು ಗೋಚರವಾಗುವುದು ಎಂಟು ಅಥವಾ ಒಂಬತ್ತನೆಯ ಶತಮಾನಗಳ ಬಳಿಕೆ ಈ ಉತ್ಸಾಹವು ಒಂದು ರೀತಿಯ ವೀರ ವ್ರತವಾಗಿಯೂ ಪರಿಣಮಿಸಿರುವುದುಂಟು. " ಕುಂಬಾರ ಜಾತಿಯ ಜೀವಣ್ಣ ಎಂಬಾತನು ತಲೆಯನ್ನು ತೊಳೆದು, ಅನ್ನರುಣದ 'ವೀರಭದ್ರತೆಯನ್ನು ಕೈಗೊಂಡು ಕುಂಬೇಶ್ವರ ದೇವರನ್ನು ಪ್ರತಿಷ್ಠೆ ಮಾಡಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ. ಲಿಂಗಶಿವಜಿಯ ಎಂಬುವರು ಭಿಕ್ಷವೃತ್ತಿಯಿಂದ ಹಣವನ್ನು ಸಂಪಾದಿಸಿ ಜಟಿಂಗ ರಾಮೇಶ್ವರದಲ್ಲಿದ್ದ ಇಟ್ಟಿಗೆಯ ದೇವಸ್ಥಾನವನ್ನು ಕೆಡವಿಸಿ, ಅದನ್ನು ಶಿಲೆಯಲ್ಲಿ ಕಟ್ಟಿಸಿ ಕಳಶವನ್ನು ಇಡಿಸುವುದಲ್ಲದೇ, ಇನ್ನು ಅನೇಕ ದೇವಸ್ಥಾನಗಳನ್ನು ಕಟ್ಟಿರುವ ವಿಷಯವನ್ನು ಶಾಸನವೊಂದು ಹೇಳುತ್ತದೆ.

ದೇವಸ್ಥಾನವನ್ನು ಕಟ್ಟಿಸಿದರೆ ಸಾಲದು, ಅದು ಸಾರೋದ್ಧಾರವಾಗಿ ನಡೆಯುತ್ತಾ ಊರ್ಜಿತವಾಗಬೇಕಾಗುತ್ತದೆ. ಅದು ಭಕ್ತ ಜನರಿಂದ ಆಗಾಗ್ಗೆ ಬರಬಹುದಾದ ಕಾಣಿಕೆಗಳನ್ನು ಅವಲಂಬಿಸಿ ಕುಳಿತುಕೊಳ್ಳಲಾರದು. ಆದಕಾರಣ ದತ್ತಿಗಳನ್ನು ಬಿಡುತ್ತಿದ್ದನು. ಅಷ್ಟು ಅಲ್ಲ, ಒಬ್ಬ ವ್ಯಕ್ತಿಯಿಂದ ದೇವಸ್ಥಾನವು ನಿರ್ಮಾಣವಾಯಿತೆಂದರೆ ಹತ್ತಾರು ಜನರು ಹತ್ತಾರು ಶ್ರೇಣಿಗಳು ಒಮ್ಮೊಮ್ಮೆ ಹತ್ತಾರು ಗ್ರಾಮಗಳು ಸೇರಿ ಅದಕ್ಕೆ ದತ್ತಿಯನ್ನು ಬಿಟ್ಟುಕೊಡುತ್ತಿದ್ದರು. ಈ ಸಾಂಘಿಕವಾದ ಚಟುವಟಿಕೆಗಳು ನಮಗೆ ಆಶ್ಚರ್ಯವನ್ನುಂಟು ಮಾಡುತ್ತದೆ. ದೇವಾಸ್ಥಾನದ ಆಸ್ತಿಯೇ 'ದೇವಭೋಗ' ದೇವರ ಮೇಲಿನ ಭಕ್ತಿಯಿಂದಲೋ, ದೇವಾಸ್ಥಾನದ ವೈಭವವೇ ನೋಡಿ ವಿಸ್ಮಿತರಾಗಿರೋ ಭಕ್ತ ಜನರು ಆಗಾಗ್ಗೆ ತಮ್ಮ ಕೈಲಾದಷ್ಟು ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ದೇವಾಸ್ಥಾನದ ಆಸ್ತಿಯು ಹೀಗೆಯೇ ಬೆಳೆದುಕೊಂಡು ಹೋಗುತ್ತಿದ್ದಿತು.

**ಊ) ದೇವಾಸ್ಥಾನ ವಿದ್ಯಾಕೇಂದ್ರ :**

ದೇವಸ್ಥಾನವು ಮುನಿಗಳ ವಾಸಸ್ಥಾನವಾಗಿದ್ದು, ಮಾತ್ರವಲ್ಲ, ದೊಡ್ಡ ವಿದ್ಯಾಕೇಂದ್ರವು ಆಗಿದ್ದಿತು. ಮಠ ಎಂಬ ಪದಕ್ಕೆ 'ವಾಸಸ್ಥಾನ' ಎಂಬುದು ಮೂಲಾರ್ಥ, ಅಂತಹ' ವಾಸಸ್ಥಾನಗಳಲ್ಲಿ ವಿದ್ಯಾದಾನ ನಡೆಯುತ್ತಿದ್ದುದರಿಂದ 'ವಿದ್ಯಾಕೇಂದ್ರ ಪಾಠಶಾಲೆ, ಎಂಬ ಅರ್ಥಗಳು ಬಂದಿರಬೇಕು, ಅಮರ ಕೋಶದಲ್ಲಿ 'ಶಿಷ್ಯರಿರುವ ಸ್ಥಳ' ಎರು ಅರ್ಥವನ್ನು ಕೊಟ್ಟಿದೆಯಾದರೂ ಈಗಲೂ ಹಳ್ಳಿಗಳಲ್ಲಿ ಪಾಠ ಶಾಲೆಗಳನ್ನು ಮಠ, ಸಾಲೆಮಠ ಎಂದು ಕರೆಯಲೂ ಬಹುಮಟ್ಟಿಗೆ ಪ್ರಾಚೀನ ದೇವಾಸ್ತಾನಗಳೇ ಕಾರಣ. ಸಮಾಜದಲ್ಲಿ ವಿದ್ಯಾಭ್ಯಾಸದ ಕೇಂದ್ರವಾಗಿ ದೇವಾಸ್ಥಾನವು ವಹಿಸಿದ ಪಾತ್ರವನ್ನು ಇನ್ನೊಂದು ಅರ್ಥ ಆಯಾಯದಲ್ಲಿ ವಿಸ್ತಾರವಾಗಿ ಚರ್ಚಿಸಲಾಗುತ್ತದೆ. ಇಂತಹ ವಿದ್ಯಾಕೇಂದ್ರಗಳು ವೇದ ವ್ಯಾಕರಣ ಪುರಾಣ, ದರ್ಶನಾದಿಗಳ, ವಿದ್ಯಾಸ್ಥಾನ, ಅನಾಥ ರೋಗಿಗಳಿಗೆ ವೈಫಲ್ಯಸ್ಥಾನ, ದೀನ, ಅನಾಥ, ಅಂಧ, ಬಧಿರ, ಗಾಯಕಾದಿ ನಾನಾ ಭಿಕ್ಷುಗಳಿಗೆ ದಾನಸ್ಥಾನ, ಸಕಲಪ್ರಾಣಿಗಳಿಗೆ ಅಭಯಸ್ಥಾನ, ಇಂತಹ ಪ್ರಸಿದ್ಧ ಮಠದ ಕೀರ್ತಿಯನ್ನು ಕೇಳಿ ದಕ್ಷಿಣ ದಿಗ್ಭಾಗವನ್ನು ಸಾಧಿಸುವುದಕ್ಕೆಂದು ಬಂದಿದ್ದ ಬಿಜ್ಜಳನು ಆ ಮಠದಲ್ಲಿ ಏನಾದರೂ ಧರ್ಮ ಕಾರ್ಯವನ್ನು ಮಾಡಬೇಕೆಂದು ನಿಶ್ಚಯಸಿ ಕೇದಾರೇಶ್ವರ ದೇವರ ಅಂಗಭೋಗಕ್ಕೆ ತಪೋಧರ ಆಹಾರಧಾನ್ಯಕ್ಕೆ ವಿದ್ಯಾದಾನಕ್ಕೆ ದತ್ತಿಯನ್ನು ಬಿಟ್ಟುಕೊಡುತ್ತಾರೆ". ಇಷ್ಟೊಂದು ಬಹುಮುಖವಾದ ಚಟುವಟಿಕೆಗಳು ಕೇಂದ್ರವಾಗಿದ್ದ ದೇವಸ್ಥಾನಗಳು ಬಹಳ ಕಡಿಮೆ ಪ್ರಮಾಣಗದಲ್ಲಿರುವುದು ಕಂಡು ಬರುತ್ತದೆ.

**ಋ) ದೇವಾಲಯಗಳ ಲಕ್ಷಣಗಳು :**

ಗುಲ್ಬರ್ಗಾ ಜಿಲ್ಲೆ ವಾಸ್ತುಶಿಲ್ಪ ಕಲೆಗಳ ತೊಟ್ಟಿಲಾಗಿ ಪರಿಣಮಿಸಿದೆಯೆಂದು ಹೇಳಬಹುದು. ಚಾಲುಕ್ಯ ಮತ್ತು ರಾಷ್ಟ್ರಕೂಟರ ಕಾಲದ ವಾಸ್ತುಶಿಲ್ಪ ಮತ್ತು ಮೂರ್ತಿ ಶಿಲ್ಪಗಳನ್ನು ಪ್ರತಿಯೊಂದು ದೇವಾಲಯಗಳಲ್ಲಿ ಕಾಣಬಹುದಾಗಿದೆ. ಕಲಬುರಗಿ ಜಿಲ್ಲೆಯ ಪ್ರಮುಖ ದೇವಾಲಯಗಳನ್ನು ಗಮನಿಸಿದರೆ ಕೆಳಗಿನ ಅಂಶಗಳು ಪ್ರಮುಖವಾಗಿ ಗೋಚರವಾಗುತ್ತದೆ. ಮುಖಮಂಪಟ, ರಂಗಮಂಟಪ, ಮಧ್ಯಮಂಟಪ, ಸುಕನಾಶಿ ಪ್ರದಕ್ಷಿಣ ಫಥ, ಗರ್ಭಗೃಹ

ಅಲಂಕೃತ ಸ್ತಂಭಗಳ ಸಾಲುಗಳು, ಮೇಲ್ಛಾವಣಿ ಅಷ್ಟದಿಕ್ಪಾಲಕರು, ಸಂಗೀತ ನೃತ್ಯ, ದೃಶ್ಯವಳಿಗಳು ಗುಡಿಗಳು ಎದ್ದು ಕಾಣುತ್ತವೆ.

**ಬಾದಾಮಿ ಚಾಳುಕ್ಯರ ಕಾಲದ ದೇವಾಲಯಗಳ ಲಕ್ಷಣಗಳು:**

೧) ದೇವಾಲಯಗಳು ಪೂರ್ವಕೆ ಮುಖ ಮಾಡಿದ್ದು ೩-೪ ಅಡಿ ಎತ್ತರದ ಜಗಲಿಯ ಮೇಲೆ ನಿಂತಿರುತ್ತದೆ.

೨) ದೇವಾಲಯಗಳು ಮುಖ ಮಂಟಪ, ನವರಂಗ ಮಂಟಪ (ರಂಗ ಮಂಟಪ), ಸುಖನಾಸಿ ಮತ್ತು ಗರ್ಭಗುಡಿಗಳನ್ನು ಹೊಂದಿರುತ್ತವೆ.

೩) ದೇವಾಲಯಗಳು ಮಟ್ಟಸವಾದ ಮೇಲ್ಚಾವಣಿಯಿಂದ ಕೂಡಿದೆ.

೪) ಗರ್ಭಗೃಹದ ಸುತ್ತ ದೇವಾಲಯ ಒಳಭಾಗದಲ್ಲಿ ಪ್ರದಕ್ಷಿಣಪಥ ಇರುತ್ತದೆ. ಆದರೆ ಹೊಯ್ಸಳ ಶೈಲಿಯಲ್ಲಿ ಪ್ರದಕ್ಷಿಣ ಪಥ ದೇವಾಲಯದ ಹೊರ ಭಾಗದಲ್ಲಿರುತ್ತದೆ.

೫) ಮೊದ ಮೊದಲು ಗರ್ಭಗುಡಿ ದೇವಾಲಯದ ಒಳಭಾಗದಲ್ಲಿರುತಿತ್ತು. ಆನಂತರ ಕ್ರಮೇಣ ಗರ್ಭಗೃಹ ಬೇರೆಯಾಗಿ ಅವುಗಳ ಮೇಲೆ ಶಿಖರಗಳು ಕಾಣಿಸಿಕೊಂಡವು ಹಾಗೂ ಗರ್ಭಗೃಹಕ್ಕೆ ಸುಖನಾಸಿಸ್ತಂಭ ಮಂಟಪವನ್ನು ಸೇರಿಸಲಾಯಿತು.

೬) ವೈವಿಧ್ಯಮಯ ಕೆತ್ತನೆಗಳಿಂದ ಕೂಡಿದ ಗೋಡೆಗಳು

೭) ನಾಗರ ಮತ್ತು ದ್ರಾವಿಡ ಶೈಲಿಗಳನ್ನು ಒಳಗೊಂಡ ವೇಸರ ಶೈಲಿಯು ಆವಿಷ್ಕಾರ.

೮) ಕಲೆಗೆ ಮರಳು ಕಲ್ಲಿನ ಬದಲಿಗೆ ಪಚ್ಚೆಯ ಇಲ್ಲವೆ ಕರ್ನಿಲಿ ಕಲ್ಲನ್ನು ಬಳಸಲಾಗಿದೆ.

**ರಾಷ್ಟ್ರಕೂಟರ ಕಾಲದ ದೇವಾಲಯಗಳ ಲಕ್ಷಣಗಳು :**

ರಾಷ್ಟ್ರಕೂಟರ ಕಾಲಕ್ಕೆ ಸೇರಿದ ೨೦ ಕ್ಕೂ ಹೆಚ್ಚು ದೇವಾಲಯಗಳು ಕಂಡುಬಂದಿವೆ. ರಾಷ್ಟ್ರಕೂಟರು ಚಾಳುಕ್ಯರು ವಾಸ್ತುಶಿಲ್ಪ ಶೈಲಿಯನ್ನು ಮುಂದುವರಿಸಿದರು.

೧) ಸಾಮಾನ್ಯವಾಗಿ ದೇವಾಲಯಗಳು ಗರ್ಭಗುಡಿ ಅರ್ಧ ಮಂಟಪ, ನವರಂಗ ಹಾಗೂ ಮುಖಮಂಟಪಗಳಿಂದ ಕೂಡಿರುತ್ತದೆ.

೨) ದೇವಾಲಯದ ಸೌಂದರ್ಯ ಹೆಚ್ಚಿಸಲು ದ್ವಿಕೂಟ, ತ್ರಿಕೂಟ ದೇವಾಲಯಗಳನ್ನು ನಿರ್ಮಿಸಿದರು.

೩) ಹೊಯ್ಸಳ ಶೈಲಿಯಂತೆ ನಕ್ಷತ್ರಾಕಾರದ ತಳವಿನ್ಯಾಸದ ಮೇಲೆ ದೇವಾಲಯ, ನಿರ್ಮಾಣ.

೪) ದೇವಾಲಯದ ಕಂಬಗಳು ಹಾಗೂ ಮೇಲ್ಛಾಣಿಯ ಭಾಗಗಳು ಅಪರೂಪವಾದ ಉಬ್ಬು ಶಿಲ್ಪಗಳಿಂದ ಕೂಡಿದೆ.

೫) ವಾಸ್ತು ರಚನೆಗೆ ಕೆಂಪು ಮರಳುಗಳಲ್ಲು, ಗ್ರಾನೈಟ್ ಹಾಗೂ ಪದರ ಕಲ್ಲನೇ ಬಳಸಿರುವುದು.

೬) ಚಚ್ಚೌಕಾರದ ಬಳ್ಳಿಯ ಅಲಂಕಾರದ ಕಂಬಗಳ ರಚನೆ, ಅವನ್ನು ಹೂಬಳ್ಳಿಗಳಿಂದ ಅಲಂಕರಿಸಿರುವುದು.

೭) ಗರ್ಭಗುಡಿಯ ಎರಡು ಬದಿಗಳಲ್ಲಿ ಬೃಹತ್ ಗಾತ್ರದ ದ್ವಾರಪಾಲಕರ ವಿಗ್ರಹಗಳನ್ನು ಕೆತ್ತಿರುವುದು. ಪಕ್ಕ ಗೋಡೆಗಳ ಕಂಬಗಳಲ್ಲಿ ತರಂಗ ಚಾಚು ಪೀಠಗಳಿವೆ. ಉದಾ: ನಿಡಗುಂದಿಯ ನವನಾರಾಯಣ ದೇವಾಲಯವಾಗಿದೆ.

೮) ಅಂತಸ್ತುಗಳುಳ್ಳ ಬಸದಿಗಳ ನಿರ್ಮಾಣ, (ಪಟ್ಟದಕಲ್ಲು)

೯) ಕೆಲವು ದೇವಾಲಯಗಳಲ್ಲಿ ನಾಗರ ಶೈಲಿಯ ವಿಮಾನಗಳಿವೆ ಮತ್ತು ಕೆಲವು ದೇವಾಲಯಗಳಿಗೆ ಶಿಖರಗಳೆ ಇರುವುದಿಲ್ಲ.

**ಅಡಿ ಟಿಪ್ಪಣಿಗಳು :**

೧) ಅಫಜಲಪೂರ ತಾಲೂಕಿನ ಸಾಂಸ್ಕೃತಿಕ : ಒಂದು ಅಧ್ಯಯನ, ಪು-೧೧

೨) ಅಫಜಲಪೂರ ತಾಲೂಕಿನ ಸಾಂಸ್ಕೃತಿಕ : ಒಂದು ಅಧ್ಯಯನ, ಪು-೧೨

೩) ಡಾ॥ ಚಿದಾನಂದ ಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಾಯನ ಪ್ರಕಟಣೆ ೧೯೬೬ ಪುಟ ಸಂಖ್ಯೆ: ೧೯೩.

೪) ಎಸ್.ಆರ್.ತಡಕಲ್, ಗುಲಬರ್ಗಾ ಜಿಲ್ಲೆಯ ವೀರಶೈವ ಸಂಸ್ಕೃತಿಕ ಕೇಂದ್ರಗಳು-ಪ್ರಕಟಣೆ ೨೦೦೬ ಪುಟ ಸಂಖ್ಯೆ-೫೨.

೫) ಡಾ॥ ಎಚ್. ತಿಪ್ಪೆರುದ್ರ ಸ್ವಾಮಿ-ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಪುಟ ಸಂಖ್ಯೆ-೬೪.

೬) ಮೇಲಿನದೇ ಪುಟ ಸಂಖ್ಯೆ-೬೫.

೭) ಡಾ॥ ಆರ್ ಗೋಪಾಲ- ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.ಸಂಖ್ಯೆ-೧೫೪.

೮) ಪಾಟೀಲ ಎಂ.ಬಿ. (ಸಂ)-ಗುಲಬರ್ಗಾ ಜಿಲ್ಲೆಯ ಗ್ಯಾಜಿಟಿಯರ್ ಪು.ಸಂಖ್ಯೆ-೫೧-೫೫.

೯) ಎಚ್.ಎಸ್.ಗೋಪಾಲ್‌ರಾವ್ - ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಳುಕ್ಯರ ದೇವಾಲಯಗಳು ಒಂದು ಸಂಸ್ಕೃತಿಕ ಅಧ್ಯಾಯನ, ಪು.ಸಂ.೫೭.

೧೦) ಡಾ॥ ಎಚ್. ತಿಪ್ಪೆರುದ್ರಸ್ವಾಮಿ- ಕರ್ನಾಟಕ ಸಂಸ್ಕೃತಿ ಸಮೀಕ್ಷೆ- ಪು.ಸಂ.೫೬.

೧೧) ಎಸ್.ಆರ್.ತಡಕಲ್, ಗುಲ್ಬರ್ಗಾ ಜಿಲ್ಲೆಯ ವೀರಶೈವ ಸಂಸ್ಕೃತಿಕ ಕೇಂದ್ರ ಪ್ರಕಟಣೆ-೨೦೦೬, ಪು.ಸಂಖ್ಯೆ-೫೨

೧೨) ಡಾ॥ ಚಿದಾನಂದ ಮೂರ್ತಿ ಕನ್ನಡ ಶಾಸನಗಳ ಸಂಸ್ಕೃತಿಕ ಅಧ್ಯಾಯನ ಪ್ರಕಟಣೆ-೨೦೦೬, ಪುಟ, ಸಂಖ್ಯೆ೫೨.

೧೩) ಕೆ.ಎನ್.ಶ್ವತಪ್ಪ ಸಂಪುಟ- ಸಮಗ್ರ ಭಾರತ ಇತಿಹಾಸ ಪು.ಸಂ.೩೮೯-೪೩೫

೧೪) ಡಾ॥ ಎಚ್. ತಿಪ್ಪೆರುದ್ರ ಸ್ವಾಮಿ- ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.ಸಂ.೬೪

## ಅಧ್ಯಾಯ – ೪
## ಚಿಂಚೋಳಿ ತಾಲೂಕಿನ ಪ್ರಮುಖ ದೇವಾಲಯಗಳು

ದೇವಾಲಯಗಳ ಕುರಿತಾದ ಇದಿಷ್ಟು ಮಾಹಿತಿಯೊಂದಿಗೆ ಈಗ ನೇರವಾಗಿ ಚಿಂಚೋಳಿ ತಾಲೂಕಿನಲ್ಲಿರುವ ದೇವಾಲಯಗಳ ಕುರಿತಾದ ಅಧ್ಯಾಯನಕ್ಕೆ ತೊಡಗಿಸಿಕೊಳ್ಳಲಾಗಿದೆ. ಈ ಕೆಳಗಿನ ಪ್ರಮುಖ ದೇವಾಲಯಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂದರ್ಶಿಸಿ ಸಮಗ್ರ ವಿವರ ಪಡೆಯಲಾಗಿದೆ.

೧) ಸಂಗಮೇಶ್ವರ ದೇವಸ್ಥಾನ – ದೇಗುಲಮಡಿ
೨) ವೀರಭದ್ರೇಶ್ವರ ದೇವಸ್ಥಾನ – ಸುಲೇಪೇಟ
೩) ರಾಮಲಿಂಗೇಶ್ವರ ದೇವಸ್ಥಾನ – ಮೊಘಾ
೪) ಪಾಂಡುರಂಗ ದೇವಸ್ಥಾನ – ಹಲಕೂಡ
೫) ನಾಗಮ್ಮದೇವಿ ದೇವಸ್ಥಾನ – ಹಲಕೂಡ
೬) ಪಾಪನಾಶ ದೇವಸ್ಥಾನ – ಮಿರಿಯಾಣ
೭) ಸೋಮೇಶ್ವರ ದೇವಸ್ಥಾನ – ಚೆಂಗಟಾ
೮) ಮಲ್ಲಿಕಾರ್ಜುನ ದೇವಸ್ಥಾನ – ಕುಪನೂರ
೯) ಆಂಜೇನೆಯ ದೇವಸ್ಥಾನ – ಹಾಳೂರು
೧೦) ಬಕ್ಕಪ್ರಭು ದೇವಸ್ಥಾನ – ಗೊಟ್ಟಂಗೊಟ್ಟ
೧೧) ಕೋರವಂಜೇಶ್ವರಿ ದೇವಸ್ಥಾನ – ಕೋರವಿ
೧೨) ಸೋಮಲಿಂಗೇಶ್ವರ ದೇವಸ್ಥಾನ – ಸೋಮಲಿಂಗದಹಳ್ಳಿ

ನಮ್ಮ ಸಂಸ್ಕೃತಿಯ ಚಿಂತಕರಾದ ಡಿ.ನಂದಳಿಕೆ ಶ್ರೀ ಶಿನಪ್ಪ ಹೆಗಡೆಯವರು ಹೇಳಿರುವಂತೆ ದೇವಾಲಯಗಳು ಬಾಲಕರ ಶಿಕ್ಷಣದ ಮೂಲ ಉಗಮಸ್ಥಾನಗಳಾಗಿವೆ. ಅನಾಥರಿಗೆ ಆಶ್ರಯತಾಣ, ರೋಗಗಳಿಗೆ ಔಷಧ ಆಲಯಗಳು, ಜ್ಞಾನದಾಸೋಹಕ್ಕೆ ಕೇಂದ್ರಬಿಂದುವಾಗಿದೆ. ನ್ಯಾಯತೀರ್ಮಾನಕ್ಕೆ ಪವಿತ್ರ ನೆಲೆ ಕಲಾ ನೈಪುಣ್ಯಕ್ಕೆ ತವರು ಮನೆ, ಉತ್ಸವ ವಿನೋದಗಳಿಗೆ ಉತ್ತಮ ಸ್ಥಳವಾಗಿದೆ. ಭಕ್ತರ ಇತ್ಯಾರ್ಥ ಪೂರೈಸುವ ದೇವಲೋಕವಾಗಿವೆ. ಒಟ್ಟಿನಲ್ಲಿ ದೇವಾಲಯಗಳು ಸಾರ್ವಜನಿಕ ಆಸ್ತಿಯಾಗಿದೆ. ಇಂಥ ಘನ ಉದ್ದೇಶ ಹೊಂದಿದ ದೇವಾಲಯಗಳನ್ನು ನಶಿಸಿ ಹೋಗದಂತೆ ಸಂರಕ್ಷಿಸುವುದು ಪ್ರತಿಯೊಬ್ಬರ ಆದ್ಯ ಕರ್ತವ್ಯವಾಗಿದೆ.

**ಚಿಂಚೋಳಿ ತಾಲೂಕಿನ ಪ್ರಮುಖ ದೇವಾಲಯಗಳು:**

ಚಿಂಚೋಳಿಯೂ ಪ್ರಾಚೀನ ಐತಿಹಾಸಿಕ ಸ್ಥಳಗಳಲ್ಲಿ ಒಂದಾಗಿದೆ. ಪುಣ್ಯಕ್ಷೇತ್ರ ಕಲೆಯ ಬೀಡು ಅತ್ಯಂತ ನಾಗರಿಕತೆಯ ಹಾಗೂ ಸಾಂಸ್ಕೃತಿಕ ತಳಹದಿಯ ಮೇಲೆ ನಿರ್ಮಾಣಗೊಂಡ ಈ ಪ್ರದೇಶಕ್ಕೆ ಐತಿಹಾಸಿಕ ಹಿನ್ನಲೆಯಿದೆ. ಧಾರ್ಮಿಕ, ಸಾಂಸ್ಕೃತಿಕ ಪರಂಪರೆ ಇದೆ. ಸಮಾಜ

ಜೀವನದ ಸಿರಿಯಿದೆ ಸೊಬಗಿದೆ ಸಾವಿರಾರು ವರ್ಷಗಳು ಸಂದು ಹೋದರು ಇಂದಿಗೂ ಆಕರ್ಷಕವಾಗಿದ್ದು ಚಿಂಚೋಳಿ ಪ್ರದೇಶವು ಜನರನ್ನು ಕೈಮಾಡಿ ಕರೆಯುತ್ತದೆ. ಚಿಂಚೋಳಿ ತಾಲೂಕಿನ ಮೋಘಾ ಪ್ರದೇಶದ ದೇವಾಲಯವನ್ನು ಎಷ್ಟು ಬಣ್ಣಿಸಿದರೂ ಮನಸ್ಸಿನಲ್ಲಿರುವ ದಾಹ ಹಿಂಗುವುದೇ ಇಲ್ಲ. ಆಕಾಶವನ್ನೆ ಚುಂಬಿಸುವಂತಹ ಎತ್ತರದ ಸೌಂದರ್ಯದ ಗೋಪುರವನ್ನು ಹೊಂದಿದ್ದು, ಸುಂದರವಾದಂತಹ ನೈಸರ್ಗಿಕ ತಾಣವಾಗಿದೆ.

ಚಿಂಚೋಳಿ ಪ್ರದೇಶವು ಪ್ರಾಗೈತಿಹಾಸಿಕ ಕಾಲದಿಂದಲೂ ತನ್ನ ಪ್ರಾಮುಖ್ಯತೆ ಪಡೆದುಕೊಂಡಿದೆ. ಇತಿಹಾಸಕಾಲಕ್ಕೆ ಬಂದಾಗ ಪ್ರಾರಂಭಿಕ ಅರಸು ಮನೆತನಗಳ ಚರಿತ್ರೆಯನ್ನು ಹೇಳುವ ಶಾಸನಗಳು, ಅಳಿದುಳಿದ ಸ್ಮಾರಕಗಳು, ವೀರಗಲ್ಲುಗಳು ಇಲ್ಲಿ ದೊರೆತ ಐತಿಹಾಸಿಕ ಅವಶೇಷಗಳನ್ನು ಪುನರ ವಿಮರ್ಶಿಸಿ ಮರು ಅಧ್ಯಯನ ಮಾಡುವುದು. ಜೊತೆಗೆ ಕರ್ನಾಟಕ ಸಂಸ್ಕೃತಿಯ ಅಭಿವೃದ್ಧಿಗೆ ಅರಸರು ಹಿರಿದಾದ ಕೊಡುಗೆ ನೀಡಿದ್ದಾರೆ. ಈ ನಿಟ್ಟಿನಲ್ಲಿ ಇಲ್ಲಿನ ಅರಸರು ಧಾರ್ಮಿಕ ಸಾಮಾಜಿಕ, ರಾಜಕೀಯ, ಸಾಹಿತ್ಯ, ಸಾಂಸ್ಕೃತಿಕ ಮತ್ತು ಚಿತ್ರಕಲೆಗೆ ಮಹತ್ವದ ಕೊಡುಗೆ ನೀಡಿದ್ದಾರೆ. ಅದು ಬಹಳ ಅಮೂಲ್ಯವಾದ ಸಂಪತ್ತು ಈ ಅಮೂಲ್ಯ ಸಂಪತ್ತನ್ನು ತಿಳಿಯುವುದು ಮತ್ತು ತಿಳಿಸುವುದು ಪ್ರಸ್ತುತ ಸಮಯದಲ್ಲಿ ತೀರ ಅಗತ್ಯ ಮತ್ತು ಅವಶ್ಯಕವಾಗಿದೆ. ಈ ಹಿನ್ನೆಲೆಯಲ್ಲಿ ಚಿಂಚೋಳಿ ತಾಲೂಕಿನ ದೇವಾಲಯಗಳ ಮಹತ್ವವನ್ನು ಎಲ್ಲರಿಗೂ ತಿಳಿಸುವುದು ಮತ್ತು ಪರಿಚಯಿಸುವುದು ನನ್ನ ಅಧ್ಯಯನದ ಉದ್ದೇಶವಾಗಿದೆ.

ಈಗ ತಾಲೂಕಿನ ಪ್ರಮುಖ ದೇವಾಲಯಗಳನ್ನು ಒಂದೊಂದಾಗಿ ಮುಂದಿನಂತೆ ನೋಡೋಣ.

**೪.೧ ಸಂಗಮೇಶ್ವರ ದೇವಸ್ಥಾನ – ದೇಗುಲಮಡಿ :**

ಗ್ರಾಮದ ಹೆಸರು – ದೇಗಲಮಡಿ ತಾ॥ ಚಿಂಚೋಳಿ ಜಿ॥ ಗುಲ್ಬರ್ಗಾ
ದೇವಾಲಯದ ಹೆಸರು – 'ಸಂಗಮೇಶ್ವರ ದೇವಾಲಯ'
ದೇವಸ್ಥಾನದ ಕಾಲಮಾನ – ಸುಮಾರು 11ನೇ ಶತಮಾನ
ರಾಜಕೀಯ ಮನೆತನ/ಅರಸ – ಕಲ್ಯಾಣಿ ಚಾಲುಕ್ಯ, ಆರನೇ ವಿಕ್ರಮಾದಿತ್ಯ
ದೇವಸ್ಥಾನದ ಶೈಲಿ – ಕಲ್ಯಾಣಿ ಚಾಲುಕ್ಯ
ದೇವಸ್ಥಾನದ ದಿಕ್ಕು – ಉತ್ತರಾಭಿಮುಖ
ದೇವಸ್ಥಾನದ ಸ್ಥಳ – ಸಮುದಾಯ ಭವನ ಹತ್ತಿರ
ದೇವಾಲಯದ ವಸ್ತು – ಕಪ್ಪು ಮಿಶ್ರಿತ ಬಿಳಿ ಛಾಯಾ ಕಲ್ಲು
ಪ್ರಸ್ತುತವಿರುವ ಸುಣ್ಣಬಣ್ಣ – ಸ್ಥಳಿಯರು ಕೈಗೊಂಡಂತೆ
ಪ್ರಸ್ತುತ ಸ್ಥಿತಿಗತಿ – ಶಿಥಿಲಾವಸ್ಥೆಯಲ್ಲಿದೆ" [೧]
ಆಡುವ ಭಾಷೆ – ಹೆಚ್ಚು ಕನ್ನಡ ಕಡಿಮೆ ತೆಲುಗು

**ಸ್ಥಳವಿನ್ಯಾಸ :** ಮೂರು ಗರ್ಭಗೃಹ, ತೆರೆದ ಅಂತರಾಳ ಎಲ್ಲಕ್ಕೂ ಸೇರಿದಂತೆ ಒಂದು ನವರಂಗವಿದೆ.

ಗುಲ್ಬರ್ಗ ಜಿಲ್ಲೆಯ ಚಿಂಚೋಳಿ ತಾಲೂಕಿನ ಕೇಂದ್ರವಾದ ದೇಗುಲಮಡಿ ಚಿಂಚೋಳಿಯಿಂದ ಐದು ಕಿ.ಮೀ. ದೂರದಲ್ಲಿರುವ ಚಾರಿತ್ರಿಕ ಗ್ರಾಮವಾಗಿದೆ. ಇಲ್ಲಿರುವ ಸಂಗಮೇಶ್ವರ ದೇವಾಲಯವು ಕಲ್ಯಾಣಿ ಚಾಲುಕ್ಯ ಶೈಲಿಯಲ್ಲಿದೆ. ದೇವಾಲಯದ ಅಧಿಷ್ಠಾನವು ಮೂರು ಅಡಿ ಎತ್ತರವಾಗಿದ್ದು ಉಪಾನ, ಪದ್ಮ, ತ್ರಿಪಟ ಕುಮುದಗಳಿಂದ ಕೂಡಿದ ಪಾದಬಂಧ ಪ್ರಭೇಧಕ್ಕೆ ಸೇರಿದ್ದಾಗಿದೆ. ಇದರ ಅಧಿಷ್ಠಾನವು ಮಣ್ಣಿನಲ್ಲಿ ಮುಚ್ಚಿ ಹೋಗಿದ್ದು ಒಂದು ಅಡಿ ಮಾತ್ರ ಉಳಿದಿದೆ. ಅದಿಷ್ಠಾನ ಮತ್ತು ಭಿತ್ತಿಯ ಹಿಂಚಾಚು ಮುಂಚಾಚುಗಳಿಗೆ ತಕ್ಕಂತ ಪೂರ್ತಿ ದೇವಾಲಯವನ್ನು ಸುತ್ತುವರಿದಿದ್ದು ಅಧಿಷ್ಠಾನದ ಮಧ್ಯದಲ್ಲಿ ಅಲ್ಲಲ್ಲಿ ಹಾರವನ್ನು ಹಿಡಿದಿರುವ ಪುರುಷನ ಉಬ್ಬು ಶಿಲ್ಪಗಳು, ಯೋಗಾಸನದಲ್ಲಿ ಕುಳಿತ ಉಬ್ಬು ಶಿಲ್ಪ, ನಾಗರ ಶಿಲ್ಪ, ಮಿಥುನ ಶಿಲ್ಪಗಳನ್ನು ಕಂಡಿರಿಸಲಾಗಿದೆ. ಅಧಿಷ್ಠಾನದ ಮೇಲೆ ಮೇಜಿನ ರೀತಿಯ ವೇದಿಕೆ ಇದ್ದು ಕೆಳಭಾಗವು ಸಮಾನ ರೀತಿಯಲ್ಲಿದೆ. ಭಿತ್ತಿ ಭಾಗವನ್ನು ದಪ್ಪಗಾತ್ರದ ಗೋಡೆ ಕಂಬಗಳಿಂದ ರಚಿಸಲಾಗಿದೆ. ಗೋಡೆ ಕಲ್ಲುಗಳನ್ನು ಒಳ ಮುಖ ಮತ್ತು ಹೊರ ಮುಖದಲ್ಲಿ ನಯಗೊಳಿಸಿ ಮಧ್ಯದ ಸ್ಥಳವನ್ನು ಮಣ್ಣು ಬೆಣಚು ಕಲ್ಲುಗಳಿಂದ ತುಂಬಿ ನಾಲ್ಕು ಅಡಿ ದಪ್ಪ ಭಿತ್ತಿಯನ್ನು ನಿರ್ಮಿಸಲಾಗಿದೆ. ಇಂದು ದೇವಾಲಯದ ಒಂದು ಭಾಗದ ಹೊರ ಗೋಡೆ ಮಾತ್ರ ಉಳಿದಿದೆ. ಉಳಿದ ಭಿತ್ತಿಗಳ ಹತ್ತಿರ ಮನೆಗಳ ನಿರ್ಮಾಣವಾಗಿದ್ದು ಹಿಂಭಾಗ ಮುಳ್ಳ ಕಸದ ರಾಶಿಯಿಂದ ಕೂಡಿದ್ದು ನಿರ್ಲಕ್ಷಕ್ಕೆ ಒಳಗಾಗಿದೆ. ಮುಂಭಾಗದ ಹೊರ ಭಿತ್ತಿಯು ಮಾತ್ರ ಕಂಡು ಬರುತ್ತದೆ. ದೇವಾಲಯದ ಭಾಗದಲ್ಲಿಯ ವ್ಯಾಳ ಮೂಲೆಯು ದೇವಾಲಯದ ಸುತ್ತಲು ಸುತ್ತುವರೆದು ದೇವಾಲಯಕ್ಕೆ ಹಣಿ ಪಟ್ಟಿಯಂತೆ ಶೋಭಿಸುತ್ತದೆ. ಮುಖ್ಯ ಗರ್ಭಗೃಹದ ಮೇಲಿನ ಕಟ್ಟಡವು ದ್ವಿಶಾಲಾದಿಂದ ಕೂಡಿದ್ದು ಶಿಖರ ಭಾಗವನ್ನು ಹೊಂದಿದೆ ಆದರೆ ಇಂದು ಶಿಖರವು ನಶಿಸಿ ಹೋಗಿದೆ.

**ರಚನೆಗಳು :** ಮುಖ್ಯ ಗರ್ಭಗೃಹವು ಪೂರ್ವಭಿಮುಖವಾಗಿದ್ದು 7ಥ7 ಅಡಿ ವಿಸ್ತೀರ್ಣದಲ್ಲಿದೆ, ನಾಲ್ಕು ಮೂಲೆ ಕಂಬಗಳಿಂದ ರಚನೆಗೊಂಡ ಭಿತ್ತಿಯನ್ನು ದುರಸ್ತಿಗೊಳಿಸಲಾಗಿದೆ. ಭಿತ್ತಿಯ ಪಶ್ಚಿಮ ಗೋಡೆ ಹಲಗೆಯಂತೆ ಹೊರ ಚಾಚಿದ್ದು ಅದರ ಮೇಲೆ ಪ್ರಾಚೀನ ದೇವಾನುದೇವತೆಗಳ ಶಿಲ್ಪಗಳಿವೆ. ನಾಲ್ಕು ಮೂಲೆಗಂಬಗಳ ಮೇಲೆ ಪೌರಾಣಿಕ ಸನ್ನಿವೇಶ ದೃಷ್ಯಗಳು, ಸಾಲು ಸಾಲಾಗಿ ಹೊರಟ ದೇವತೆಗಳು, ಗಜಗಳ ಸಾಲು, ತೋರಣ ಮುಂತಾದ ಶಿಲ್ಪಗಳಿಂದ ಅಲಂಕರಿಸಲಾಗಿದೆ. ಭತ್ತಿನಲ್ಲಿ ತ್ರಿಭುಜ ಮಾದರಿಯ ಕಲ್ಲುಗಳ ನಡುವೆ ಅರಳಿದ ತ್ರಿದಳ ಕಮಲದ ಅಲಂಕರಣವಿದೆ. ಗರ್ಭಗೃಹದ ಮಧ್ಯದಲ್ಲಿ ಎರಡು ನಿಲ್ಲಿಸಿದ ಶಿವಲಿಂಗಗಳಿವೆ. ಒಂದು ಮೂರು ಅಡಿ ಇನ್ನೊಂದು ಎರಡು ಅಡಿ ಎತ್ತರವಾಗಿ ಜೋಡಿಯಲ್ಲಿ ನಿಲ್ಲಿಸಲಾಗಿದೆ. ಗರ್ಭಗೃಹದ ದ್ವಾರಬಂಧವು ಒಂದು ಅಡಿ ಎತ್ತರದ ಹೊಸ್ತಿಲ ಮೇಲೆ ಪಂಚ ಶಾಖೆಗಳನ್ನೇ ಹೊಂದಿದಂತೆ ರಚನೆಗೊಂಡಿದೆ. ಶಾಖೆಗಳಲ್ಲಿ ಕ್ರಮವಾಗಿ ಸುರಳಿಯಾಕಾರದ ಹೊಬಳ್ಳಿಗಳು, ತೋರಣ, ಒಂದಕ್ಕೊಂದು ಹೆಣೆದುಕೊಂಡ ಪುಷ್ಪಗಳು, ಗಜಗಳ ಸಾಲು ಅಲಂಕೃತ ಸ್ತಂಭಗಳಿಂದ ಅಲಂಕೃತಗೊಂಡಿದೆ. ಪ್ರತಿ ಶಾಖೆಯ ಫಲಕದಲ್ಲಿ ನೃತ್ಯ ಮಾಡುತ್ತಿರುವ, ನಮಸ್ಕರಿಸುತ್ತಿರುವ, ಕೈಯಲ್ಲಿ ತ್ರಿಶೂಲ, ಡಮರ ಹಿಡಿದಿರುವ ಚಾಮರಧಾರಿಣೆಯರ ಉಬ್ಬು ಶಿಲ್ಪಗಳಿದೆ, ಪ್ರತಿ ಶಾಖೆಯು ಲಲಾಟ ಬಿಂಬದ ವರೆಗೆ

ಹರಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪವಿದೆ. ಇದರ ಮೇಲ್ಭಾಗದ ತೊಲೆಯ ಮೇಲೆ ಎರಡು ಅಡಿ ಮುಂದೆ ಚಾಚಿದ ಐದು ಅರಳಿದ ಕಮಲಗಳ ಕೆತ್ತನೆಗಳಿವೆ. ಇದರ ಮೇಲ್ಭಾಗದ ವಿಶಾಲವಾದ ತೊಲೆಯು ಅರಳಿದ ಕಮಲಗಳ ಶಿಲ್ಪ ಕೆತ್ತನೆಗಳನ್ನು ಒಳಗೊಂಡಿದೆ. ಗರ್ಭಗೃಹದ ಮುಂದೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣವಾಗಿ 7ಥ7 ಅಡಿ ವಿಸ್ತೀರ್ಣದ ತೆರೆದ ಅಂತರಾಳದ ರಚನೆ ಇದೆ. ಇದು ಸಹ ನಾಲ್ಕು ಮೂಲೆ ಕಂಬಗಳಿಂದ ಕೂಡಿದ್ದು ಭಿತ್ತಿಯು ದುಸ್ಥಿತಿಗೊಂಡಿದೆ. ಸಾಲು ಮಕರತೋರಣದ ಅಲಂಕರಗಳಿವೆ. ಅಂತರಾಳ ಉತ್ತರ ಗೋಡೆಯ ಭಿತ್ತಿಯಲ್ಲಿ ಮೂರು ಅಡಿ ಅಗಲದ ನವಗ್ರಹ ಶಿಲ್ಪ ಕೆತ್ತನೆಯಿದೆ. ಅಂತರಾಳದ ವಳಭಾಗದಲ್ಲಿ ಸುಮಾರು ಏಳು ಅಡಿ ಎತ್ತರವಾದ ಎರಡು ಕಂಬಗಳಿವೆ. ಇವು ಸರಳಾಕೃತಿಯಲ್ಲಿವೆ. ಇವುಗಳ ಮೇಲೆ ಒಂದು ವಿಶಾಲವಾದ ತೊಲೆಯಿದೆ. ಇದರ ಮೇಲೆ ದೇವಾನುದೇವತೆಗಳ ಶಿಲ್ಪ, ಹೂವಿನ ಅಲಂಕರಣ, ಮಕರ ತೋರಣಗಳ ಕೆತ್ತನೆಗಳಿವೆ. ಇಂದು ಈ ತೊಲೆಯು ಭಗ್ನಗೊಂಡಿದ್ದು ಬೀಳುವ ಹಂತದಲ್ಲಿದೆ.

ಉತ್ತಾರಾಭಿಮುಖವಾಗಿರುವ ಗರ್ಭಗೃಹವು ವಿಸ್ತೀರ್ಣ ಮತ್ತು ರಚನೆಯಲ್ಲಿ ಮುಖ್ಯ ಗರ್ಭಗೃಹವನ್ನು ಹೋಲುತ್ತದೆ. ಛತ್ತಿನಲ್ಲಿ ತ್ರಿಕೋನ ಮಾದರಿಯ ಕಲ್ಲುಗಳ ನಡುವೆ ನಕ್ಷತ್ರಾಕಾರ ಅಲಂಕರಣವಿದೆ. ಗರ್ಭಗೃಹದ ಮಧ್ಯದಲ್ಲಿ ನಾಲ್ಕು ರೆಡಿ ಎತ್ತರವಾದ ಶಿವಲಿಂಗವಿದೆ. ದ್ವಾರಬಂಧವು, ಒಂದು ಅಡಿ ಎತ್ತರವಾದ ಹೊಸ್ತಿಲ ಮೇಲೆ ಪಂಚ ಶಾಖೆಗಳಿಂದ ರಚನೆಗೊಂಡಿದೆ. ಶಾಖೆಗಳಲ್ಲಿ ಕ್ರಮವಾಗಿ ಹೂ ಬಳ್ಳಿಗಳ ಸಾಲು, ಮಕರ, ತೋರಣ, ಅರಳಿದ ಕಮಲಗಳ ಶಿಲ್ಪ ಕತ್ತನೆಗಳಿವೆ. ಪ್ರತಿ ಶಾಖೆಯು ಪಾದದಲ್ಲಿ ಎಬ್ಬು ಶಿಲ್ಪಗಳಿದ್ದು ದ್ವಾರಪಾಲಕರನ್ನು ಚಾಮರಧಾರಣೆಯನ್ನು ತ್ರಿಭಂಗಿಯಲ್ಲಿ ಕಂಡರಿಸಲಾಗಿದೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪ ಕೆತ್ತನವಿದೆ. ಇದರ ಮೇಲಿನ ವಿಶಾಲವಾದ ತೊಲೆಯ ಮೇಲೆ ಒಂದು ಅಡಿ ಮುಂದೆ ಚಾಚಿದ ಅರಳಿದ ಕಮಲಗಳ ಶಿಲ್ಪ ಕೆತ್ತನೆಗಳಿವೆ. ತೆರೆದ ಅಂತರಾಳವು ಪೂರ್ವ ಪಶ್ಚಿಮ ಮತ್ತು ದಕ್ಷಿಣೋತ್ತರವಾಗಿ 7ಥ7 ಅಡಿ ವಿಸ್ತೀರ್ಣದಲ್ಲಿದೆ. ಇಲ್ಲಿಯ ತೊಲೆಗಳ ಮೇಲೆ ವಜ್ರಾಕೃತಿಯಲ್ಲಿ ಹೂವಿನ ಅಲಂಕರಣ, ಪೌರಾಣಿಕ ಸನ್ನಿವೇಶಗಳ ದೃಶ್ಯಗಳನ್ನು ಸಾಲಾಗಿ ಬಿಡಿಸಲಾಗಿದೆ.

ದಕ್ಷಿಣಾಭಿಮುಖವಾಗಿರುವ ಗರ್ಭಗೃಹವು ರಚನೆ ಮತ್ತು ವಿಸ್ತೀರ್ಣದಲ್ಲಿ ಮುಖ್ಯ ಗರ್ಭಗೃಹವನ್ನು ಹೋಲುತ್ತದೆ. ಆದರೆ ಇಂದು ಸ್ಥಳಿಯರು ಇಟ್ಟಿಗೆ ಗೋಡೆಯಿಂದ ಈ ಗರ್ಭಗೃಹವನ್ನು ಮುಚ್ಚಿದ್ದಾರೆ. ಇದರಲ್ಲಿ ನವರಂಗದ ಎರಡು ವಿಶಾಲವಾದ ಕಂಬಗಳು ಸೇರಿದೆ. ಇದನು ಮುಚ್ಚಲು ಕಾರಣವೆಂದರೆ ವಿಶಾಲವಾದ ಅಂತರಾಳದ ತೊಲೆಯ ಶೀಥಿಲಗೊಂಡು ಭೀಳುವ ಹಂತದಲ್ಲಿತ್ತು ಅದರ ಆಸರೆಗೆ ಇಟ್ಟಿಗೆಯ ಗೋಡೆಯನ್ನು ನಿರ್ಮಿಸಲಾಗಿದೆ. ಮೂರು ಅಂತರಾಳಗಳು ಒಂದೇ ನವರಂಗಕ್ಕೆ ಜೋಡಣೆಗೊಂಡಿವೆ. ನವರಂಗದ ಮಧ್ಯದಲ್ಲಿ ಸುಮಾರು 8ಥ8 ಅಡಿ ಉದ್ದಗಲದ ಚೌಕಾಕಾರದ ವೇದಿಕೆ ಇದ್ದು ಅವರ ಮೂಲೆಗಳಲ್ಲಿ ನಯಗೊಳಿಸಿದ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಸುಮಾರು ಏಳು ಅಡಿ ಎತ್ತರವಾಗಿದ್ದು ಕೀರ್ತಿಮುಖಗಳ ಅಲಂಕರಣವನ್ನು ನಾಲ್ಕು ಮಗ್ಗಲುಗಳಲ್ಲಿ ಹೊಂದಿವೆ. ಪೀಠದ ಮೇಲೆ ಚೌಕಾಕಾರದ ಪಾದ ಭಾಗವನ್ನು ಅದರ ಮೇಲೆ

ಗಂಜಾಕಾರ ರಚನೆಯನ್ನು ಬಳೆಗಳ ಅಲಂಕರಣವನ್ನು ಹೊಂದಿದೆ. ಗೃಹದಲ್ಲಿ ಕಳಶ, ಘಟ, ಫಲಕಗಳ ರಚನೆಗಳಿವೆ. ಕೊನೆಯಲ್ಲಿ ಬೋದಿಗೆ ಇದೆ. ನಾಲ್ಕು ಮುಖದ ಬೋದಿಗೆಗಳು ಒಂದು ಅಡಿ ದಪ್ಪ ಎರಡು ಅಡಿ ಅಗಲದ ಕಲ್ಲು ತೊಲೆಗಳಿಂದ ಗೋಡೆ ಕಂಬಗಳೊಂದಿಗೆ ಸಂಪರ್ಕವನ್ನು ಪಡೆದುಕೊಂಡು ಒಂಬತ್ತು ಅಂಕರಣಗಳನ್ನು ರಚಿಸಿವೆ. ಪ್ರತಿ ತೊಲೆಯ ಮಧ್ಯದಲ್ಲಿ ಮೂರು ಸುತ್ತಿನ ಕಮಲಗಳ ಅಲಂಕರಣ ಪೌರಾಣಿಕ ಸನ್ನಿವೇಶಗಳ ದೃಶ್ಯಾ ದೇವಾನುದೇವತೆಗಳ ಸಾಲುಗಳ ಅಲಂಕರಣವನ್ನು ಹೊಂದಿದೆ.

ಎಲ್ಲ ಅಂಕಣದ ಛತ್ತುಗಳು ಸಮತಲದಲ್ಲಿ ಅರಳಿದ ಕಮಲಗಳ ಅಲಂಕರಣದಿಂದ ಆಕರ್ಷಕವಾಗಿವೆ. ಮಧ್ಯದದಲ್ಲಿ ವಿಶೇಷವಾಗಿ ಅಲಂಕರಿಸಲಾಗಿದೆ. ಚೌಕವನ್ನು ಪುಷ್ಪ ಪಟ್ಟಿಕೆ ಹಗ್ಗ ಮಾದರಿಯ ಅಲಂಕೃತ ಪಟ್ಟಿಯಿಂದ ಕಟ್ಟುಕಟ್ಟಿ ಒಳ ಭಾಗವನ್ನು ಒಂಬತ್ತು ಭಾಗಗಳನ್ನಾಗಿ ವಿಂಗಡಿಸಿ ಪ್ರತಿ ಚೌಕದಲ್ಲೂ ಕಮಲಗಳನ್ನು ಬಿಡಸಲಾಗಿದೆ. ಚೌಕದ ಮೂಲೆಗಳಲ್ಲಿ ಸಿಂಹ ಮುಖಗಳಿವೆ. ಮಧ್ಯದ ಅಡ್ಡ ಪಟ್ಟಿಗಳು ಕಟ್ಟಿಗೆ ತೊಲೆಗಳಲ್ಲಿ ಕತ್ತಿದಂತೆ ತೋರುತ್ತವೆ. ವೇದಿಕೆಯ ಮಧ್ಯದಲ್ಲಿ ಮುಖಕ್ಕೆ ಎದುರಾಗಿ ನಂದಿ ಶಿಲ್ಪವಿದೆ ನವರಂಗದ ದ್ವಾರಬಂಧವು ಒಂದು ಅಡಿ ಎತ್ತರ ಹೊಸ್ತಿಲ ಮೇಲೆ ಸಪ್ತ ಶಾಖೆಗಳಿಂದ ಅಲಂಕೃತಗೊಂಡಿದೆ. ಮೊದಲ ಎರಡು ಶಾಖೆಗಳು ಲಲಾಟ ಫಲಕದವರೆಗೂ ಮುಂದುವರಿದೆ ಇದಕ್ಕೆ ಇತ್ತೀಚಿಗೆ ಗ್ರಾಮದ ವತಿಯಿಂದ ಕಬ್ಬಿಣದ ಗೇಟನ್ನು ಕೂಡಿಸಲಾಗಿದೆ ಮುಂಭಾಗ ದ್ವಾರಕ್ಕೆ ಹತ್ತಲು ಸೋಪಾನುಗಳಿವೆ. ಇವುಗಳ ಎಡ ಮತ್ತು ಬಲ ಭಾಗಕ್ಕೆ ಭಗ್ನಗೊಂಡ ಆನೆಗಳ ಶಿಲ್ಪ ಕತ್ತನೆಗಳಿವೆ. ಒಟ್ಟಾರೆ ದೇವಾಲಯವು ಶಿಥಿಲಾವ್ಯಸ್ಥೆಯಲ್ಲಿರುವ ತನ್ನ ಮೂಲ ವಿನ್ಯಾಸ ಉಳಿಸಿಕೊಂಡಿದೆ" [೨] ಈ ಎಲ್ಲ ವರ್ಣನೆಯನ್ನು ಇಂದಿನ ಸಂದರ್ಶನದಲ್ಲಿಯು ಅದೇ ಸ್ವರೂಪದಲ್ಲಿ ಕಂಡುಬಂದಿದೆ.

**೪.೨ ಶಂಭುಲಿಂಗ ದೇವಸ್ಥಾನ (ವೀರಭದ್ರೇಶ್ವರ)ದ ಹಿನ್ನಲೆ – ಸುಲೇಪೇಟ :**

| | | |
|---|---|---|
| ಗ್ರಾಮದ ಹೆಸರು | – | ಸುಲೇಪೇಟ ತಾ॥ ಚಿಂಚೋಳಿ ಜಿ॥ ಗುಲ್ಬರ್ಗ |
| ದೇವಸ್ಥಾನದ ಹೆಸರು | – | ಶಂಭುಲಿಂಗ ದೇವಾಲಯ |
| ಪ್ರಸ್ತುತ ದೇವಸ್ಥಾನದ ಹೆಸರು | – | ವೀರಭದ್ರೇಶ್ವರ ದೇವಾಲಯ |
| ದೇವಸ್ಥಾನದ ಕಾಲಮಾನ | – | ಸುಮಾರು 10ನೇ ಶತಮಾನ |
| ರಾಜಕೀಯ ಮನೆತನ/ಅರಸ | – | ಕಲ್ಯಾಣಿ ಚಾಲುಕ್ಯ, ಒಂದನೇ ಸೋಮೇಶ್ವರ |
| ದೇವಸ್ಥಾನದ ಶೈಲಿ | – | ಕಲ್ಯಾಣಿ ಚಾಲುಕ್ಯ |
| ದೇವಸ್ಥಾನದ ದಿಕ್ಕು | – | ಪೂರ್ವಾಭಿಮುಖ |
| ದೇವಸ್ಥಾನದ ಸ್ಥಳ | – | ಹಳೆಕೇರಿ |
| ಪ್ರಸ್ತುತ ಮೇಲ್ವಿಚಾರಣೆ | – | ಗ್ರಾಮದ ವತಿಯಿಂದ |
| ಪ್ರಸ್ತುತ ಸ್ಥಿತಿಗತಿ | – | ಜೀರ್ಣೋದ್ಧಾರಗೊಂಡಿದೆ |
| ಪ್ರಸ್ತುತ ಇರುವ ಭಾಷೆ | – | ಕನ್ನಡ, ತೆಲುಗು, ಹಿಂದಿ |
| ಊಡುಗೆ ತೊಡುಗೆ | – | ಸಾಧಾರಣ |

**ಸ್ಥಳ ವಿನ್ಯಾಸ :** ಮೂರು ಗರ್ಭಗೃಹ, ದಕ್ಷಿಣ ಗರ್ಭಗೃಹ ಇಲ್ಲ ಅಂತರಾಳ, ಎಲ್ಲಕ್ಕೂ ಸೇರಿ ಒಂದು ನವರಂಗ, ವಿಶಾಲವಾದ ಮುಖಮಂಟಪ.

**ಪ್ರಮುಖ ಉರ್ದ್ವಮುಖ ರಚನೆ :** ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲೂಕಿನ ಕೇಂದ್ರವಾದ ಸುಲೇಪೇಟ ಚಿಂಚೋಳಿಯಿಂದ ನೈರುತ್ಯಕ್ಕೆ ಹನ್ನೆರಡು ಕಿ.ಮೀ. ದೂರದಲ್ಲಿರುವ ಚಾರಿತ್ರಿಕ ಸ್ಥಳವಾಗಿದೆ ಮತ್ತು ವ್ಯಾಪಾರ ವಾಣಿಜ್ಯ ವ್ಯವಹಾರಗಳ ಪ್ರಮುಖ ಕೇಂದ್ರವಾಗಿದೆ.

ಹಳೆ ಊರಿನಲ್ಲಿರುವ ಶ್ರೀ ವೀರಭದೇಶ್ವರ ದೇವಾಲಯವು ಅತ್ಯಂತ ಪ್ರಾಚೀನ ದೇವಾಲಯವಾಗಿದೆ. ಇದು ದ್ವಿಕೂಟವಾಗಿದ್ದು, ಒಂದರಲ್ಲಿ ಶಿವಲಿಂಗ, ಇನ್ನೊಂದರಲ್ಲಿ ವೀರಭದ್ರನ ಮೂರ್ತಿ ಇದೆ. ವೀಭದ್ರನಿರುವ ಗರ್ಭಗೃಹದ ಶಿಖರದಲ್ಲಿ ಪದ್ಮಾಸೀನ ತೀರ್ಥಂಕರನ ಶಿಲ್ಪವಿದೆ. ನವರಂಗದಲ್ಲಿ ಸರಸ್ವತಿ ಮತ್ತು ಮಹಿಷ ಮರ್ದಿನಿಯರ ಶಿಲ್ಪಗಳಿವೆ. ಪ್ರಾಚೀನ ಶಾಸನಗಳಲ್ಲಿ ಸುಲಿ ಗ್ರಾಮವೆಂದು ಉಲ್ಲೇಖಿತವಾಗಿದೆ. ಇಲ್ಲಿರುವ ದೇವಾಸ್ಥಾನವು ಕಲ್ಯಾಣಿ ಚಾಲುಕ್ಯರ ಶೈಲಿಯಲ್ಲಿದೆ ದೇವಾಲಯದ ಅಧಿಷ್ಠಾನವು ಕಲ್ಯಾಣಿ ಚಾಲುಕ್ಯರ ಶೈಲಿಯಲ್ಲಿದೆ ದೇವಾಲಯದ ಅಧಿಷ್ಠಾನವು ಮೂರು ಅಡಿ ಎತ್ತರವಾಗಿರುವ ಜಗಲಿಯು ಮೇಲಿದ್ದು ಉಪಾನ, ಪದ್ಮ, ಕುಮುದಗಳಿಂದ ಸೇರಿದ್ದು ಪಾದ ಪ್ರಬಂಧಕ್ಕೆ ಸೇರಿದಾಗಿದೆ. ಇದು ಅಧಿಷ್ಠಾನದ ಮೇಲೆ ಸುಂದರವಾಗಿ ಚಿತ್ರಿಸಿದ ವ್ಯಾಳಮೂಲೆಯು ಪೂರ್ತಿದೇವಾಲಯವನ್ನು ಸುತ್ತುವರೆದಿದೆ. ವ್ಯಾಳ ಮಲೆಯ ಮಧ್ಯದಲ್ಲಿ ಅಲ್ಲಲ್ಲಿ ಹೂವಿನ ಹಾರ ಹಿಡಿದ ಪುರುಷನ ಉಬ್ಬು ಶಿಲ್ಪ, ಮಿಥುನ ದೇವತೆಗಳ ಚಿಕ್ಕ ಶಿಲ್ಪ ಕೆತ್ತನೆಗಳಿವೆ. ವ್ಯಾಳಮಾಲಾ ಭಾಗದ ಮೇಲೆ ಮೇಜಿನ ರೀತಿಯ ವೇದಿಕೆ ಇದು ಕೆಳಭಾಗವು ಸಮಾನ ರೀತಿಯಲ್ಲಿದೆ. ವೇದಿಕೆಯ ಮೇಲೆ ಭಿತ್ತಿಯನ್ನು ದಪ್ಪ ಗಾತ್ರದ ಗೋಡೆ ಗಂಬಗಳಿಂದ ರಚಿಸಲಾಗಿದೆ. ಒಳಮುಖ ಮತ್ತು ಹೊರ ಮುಖದಲ್ಲಿ ನಯಗೊಳಿಸಿ ಕಲ್ಲುಗಳನ್ನು ಹೊಂದಿಸಿ ಮಧ್ಯದ ಸ್ಥಳವನ್ನು ಮಣ್ಣುಗಳಿಂದ ನಾಲ್ಕು ಅಡಿ ದಪ್ಪ ಭಿತ್ತಿಯನ್ನು ನಿರ್ಮಿಸಲಾಗಿದೆ ಅಕ್ಕ ಪಕ್ಕ ಗರ್ಭಗೃಹದ ಭದ್ರಭಾಗಗಳು ಎರಡರ ಜೊತೆ ತೆಳು ಕಂಬಗಳಿಂದ ರಚನೆಗೊಂಡಿದೆ. ಇತ್ತಿಚಿಗೆ ದೇವಾಸ್ಥಾನದ ಹೊರ ಭಿತ್ತಿಯನ್ನು ಸುಣ್ಣದಿಂದ ಅಲಂಕರಿಸಲಾಗಿದೆ. ದೇವಾಲಯದ ಭಾಗದಲ್ಲಿಯ ವ್ಯಾಳ ಮೂಲೆಯ ದೇವಾಲಯದ ಸುತ್ತಲು ಸುತ್ತುವರೆದು ದೇವಾಲಯಕ್ಕೆ ಹಗೆಪಟ್ಟಿಯಂತೆ ಶೋಭಿಸುತ್ತದೆ. ಮುಖ್ಯ ಗರ್ಭಗೃಹದ ಮೇಲಿನ ಕಟ್ಟಡವು ತ್ರೀಶಾಲಾದಿಂದ ಕೂಡಿದ್ದು ಇದರ ಮೇಲೆ ಸುಮಾರು 15 ಅಡಿ ಎತ್ತರವಿರುವ ದ್ರಾವಿಡ ಶೈಲಿಯ ಶಿಖರವಿದ್ದು ನಾಲ್ಕು ತಲಗಳಿಂದ ಹಂತ ಹಂತವಾಗಿ ಕಿರಿದಾಗುತ್ತ ದೊಡ್ಡ ಕಮಲದಂತೆ ಚೌಕಾಕಾರದ ಶಿಖರ ಭಾಗವನ್ನು ಅದರ ಶಿರೋಭಾಗದಲ್ಲಿಯ ಮಹಾಪದ್ಮದ ಕೇಂದ್ರಬಿಂದುವಿನಲ್ಲಿ ನೆಟ್ಟ ಸ್ತೂಪಿ ಭಾಗದಲ್ಲಿ ಕೊನೆಗೊಳ್ಳುತ್ತದೆ. ಶಿಖರವು ಸುಕನಾಶಿಯನ್ನು ಹೊಂದಿದೆ. ದಪ್ಪ ಗಾತ್ರದ ಗೋಡೆ ಕಂಬಗಳು ಅಂತರಾಳ ಮತ್ತು ನವರಂಗದ ಭಿತ್ತಿ ಭಾಗದಲ್ಲಿಯೂ ಮುಂದುವರೆದರೂ ಮುಂಚಾಚು ಮತ್ತು ಹಿಂಚಾಚುಗಳನ್ನು ಏರ್ಪಡಿಸಿವೆ.

**ತಿರನ್ಮುಖ ರಚನೆಗಳು :**

ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದ್ದು 6x6 ಅಡಿ ವಿಸ್ತೀರ್ಣದಲ್ಲಿದೆ. ನಾಲ್ಕು ಮೂಲೆ ಕಂಬಗಳಿಂದ ರಚನೆಗೊಂಡ ಭಿತ್ತಿಯನ್ನು ದುರಸ್ತಿಗೊಳಿಸಲಾಗಿದೆ. ಛತ್ತಿನಲ್ಲಿ

ಸಮತಲದಲ್ಲಿ ಅರಳಿದ ಕಮಲದ ಅಲಂಕರಣವಿದೆ. ಗರ್ಭಗೃಹದ ಮಧ್ಯದಲ್ಲಿ ವಿಶಾಲವಾದ ಶಿವಲಿಂಗವಿದೆ. ಇದರ ಹಿಂಭಾಗ ಗೋಡೆಯ ಭಿತ್ತಿಯು ಒಂದು ಅಡಿ ಮುಂದೆ ಚಾಚಿದ್ದು ಅದರ ಮೇಲೆ ಹೆಡೆಯನ್ನು ಎತ್ತಿರುವ ನಾಗರ ಕಂಚಿನ ವಿಗ್ರಹವನ್ನು ಇಡಲಾಗಿದೆ. ಬಾಗಿಲವಾಡವು ಅಲಂಕಾರ ರಹಿತವಾದ ಹೊಸ್ತಿಲ ಮೇಲೆ ತ್ರಿಶಾಖೆಗಳಿಂದ ರಚನೆಗೊಂಡಿದ್ದು ಶಾಖೆಗಳ ಮಧ್ಯದಲ್ಲಿ ಸುಮಾರು ಐದು ಅಡಿ ಎತ್ತರವಾದ ಕಂಬಗಳಿವೆ ಶಾಖೆಗಳು ಅಲಂಕಾರ ರಹಿತವಾಗಿದ್ದು ಬಣ್ಣಗಳಿಂದ ಅಲಂಕರಿಸಲಾಗಿದೆ. ಲಲಾಟ ಫಲಕದಲ್ಲಿ ಗಜಲಕ್ಷ್ಮೀಯ ಶಿಲ್ಪವಿದೆ ಗರ್ಭಗೃಹದ ಮುಂದೆ 6x6 ವಿಸ್ತೀರ್ಣದ ತೆರೆದ ಅಂತರಾಳವಿದೆ.

ಉತ್ತರಾಭಿಮುಖವಾಗಿರುವ ಗರ್ಭಗೃಹವು ವಿಸ್ತೀರ್ಣ ಮತ್ತು ರಚನೆಯಲ್ಲಿ ಮುಖ್ಯ ಗರ್ಭಗೃಹವನ್ನು ಹೋಲುತ್ತದೆ. ನಾಲ್ಕು ಮೂಲೆ ಗಂಬಗಳಿಂದ ರಚನೆಗೊಂಡ ಭಿತ್ತಿಯನ್ನು ದುರಸ್ತಿಗೊಳಿಸಲಾಗಿದೆ. ಭತ್ತಿನಲ್ಲಿ ತ್ರಿಭುಜಕಾರದ ಕಲ್ಲುಗಳ ನಡುವೆ ಅರಳಿದ ಕಮಲದ ಶಿಲ್ಪ ಕೆತ್ತನವಿದೆ. ಗರ್ಭಗೃಹದ ಮಧ್ಯದಲ್ಲಿ ಮೂರು ಅಡಿ ಎತ್ತರವಾದ ಶಿವಲಿಂಗವಿದ್ದು ಅದರ ಮೇಲೆ ಸ್ಥಳೀಯರು ವೀರಭದ್ರನ ಕಂಚಿನ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ. ಸ್ಥಳೀಯರ ಪ್ರಕಾರ ದಕ್ಷಿಣದ ಗರ್ಭಗೃಹದಿಂದ ವೀರಭದ್ರನೆಂದು ಗರ್ಭಗೃಹದ ದ್ವಾರಬಾಗಿಲನಾಗಿ ಮಾಡಿದ್ದಾರೆ. ಹೀಗಾಗಿ ವೀರಭದ್ರ ದೇವಾಲಯ ದ್ವಿಕೂಟ ಎನಿಸುತ್ತದೆ. ಗರ್ಭಗೃಹದ ದ್ವಾರವು ಪಂಚ ಶಾಖೆಗಳಿಂದ ರಚನೆಗೊಂಡಿದ್ದು, ಶಾಖೆಗಳು ಯಾವುದೇ ಅಲಂಕಾರವಿಲ್ಲದೆ ಸರಳ ರಚನೆಯಲ್ಲಿದೆ.

ಪ್ರತಿ ಶಾಖೆಯು ಪಾದದಲ್ಲಿ ತ್ರಿಭಂಗಿನಲ್ಲಿ ನಿಂತು ನೃತ್ಯದಲ್ಲಿ ತೊಡಗಿರುವ ಚಾಮರಧಾರಿಣೆಯರ ಶಿಲ್ಪ ಕೆತ್ತನೆಗಳಿವೆ ದ್ವಾರಕ್ಕೆ ಇತ್ತೀಚಿಗೆ ಕಬ್ಬಿಣದ ಗೇಟನ್ನು ಅಳವಡಿಸಿದ್ದಾರೆ. ಸುಣ್ಣ ಬಣ್ಣಗಳಿಂದ ಅಲಂಕರಿಸಲಾಗಿದೆ ಗರ್ಭಗೃಹದ ಮುಂದೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣವಾಗಿ 6 x6 ಅಡಿ ವಿಸ್ತೀರ್ಣದ ತೆರೆದ ಅಂತರಾಳವಿದೆ ಭತ್ತಿನಲ್ಲಿ ಮೂಲೆ ಕಲ್ಲುಗಳಿಂದ ಮಧ್ಯೆ ನಕ್ಷತ್ರ ಮಾದರಿಯ ತ್ರಿದಳ ಅರಳಿದ ಕಮಲದ ಅಲಂಕರಣವಿದೆ. ಅಂತರಾಳ ಒಳ ಭಿತ್ತಿಯಲ್ಲಿ ದೇವಾನು ದೇವತೆಗಳ ಶಿಲ್ಪ ಕತ್ತನೆಗಳಿವೆ. ಅಂತರಾಳದ ಮಧ್ಯೆ ಕುರ್ಚಿಯ ಮೇಲ ಅಲಂಕಾರಯುತ್ತ ಶ್ರೀ ವೀರಭದ್ರರ ಮೂರ್ತಿ ಶಿಲ್ಪವಿದೆ. ದಕ್ಷಿಣಾಭಿಮುಖ ಗರ್ಭಗೃಹವಿತ್ತೊ ಇಲ್ಲವೊ ಎಂಬ ಅನುವಾನವಿದೆ ಏಕೆಂದರೆ ಉತ್ತಾರಾಭಿಮುಖ ಗರ್ಭಗೃಹದಲ್ಲಿರುವ ವೀರಭದ್ರನ ವಿಗ್ರಹ ಕೊಂಡುಯ್ಯುವಲ್ಲೂ ದ್ವಾರವನ್ನು ಮಾಡಿ ಕಬ್ಬಿಣದ ಗೇಟನ್ನು ಅಳವಡಿಸಲಾಗಿದೆ. ಅದರ ರಚನೆ ಮತ್ತು ವಿಸ್ತೀರ್ಣ ನೋಡಿದರೆ ಪ್ರಧಾನ ಗರ್ಭಗೃಹವನ್ನು ಹೋಲುತ್ತದೆ. ಸ್ಥಳಿಯರ ಪ್ರಕಾರ ದ್ವಾರ ಬಾಗಿಲವಾಗಿತ್ತೆಂದು ತಿಳಿದುಬರುತ್ತದೆ. ವೀರಭದ್ರ ದೇವಾಲಯವು ಪ್ರಾರಂಭದಲ್ಲಿ ತ್ರಿಕೂಟವಾಗಿದ್ದು, ಇಂದು ದ್ವಿಕೂಟವಾಗಿ ಪರಿವರ್ತನೆಗೊಂಡಿದೆ.

ಮೂರು ಅಂತರಾಳಗಳನ್ನು ಒಂದೆಡೆ ಸೇರಿಸುವ ನವರಂಗವು ಪೂರ್ವ, ಪಶ್ಚಿಮ, ಉತ್ತರ ದಕ್ಷಿಣವಾಗಿ 7x7 ಅಡಿ ವಿಸ್ತಾರವಾಗಿದೆ. ಮಧ್ಯದಲ್ಲಿ ಚೌಕಾಕಾರದ ವೇದಿಕೆ ಇದೆ. ವೇದಿಕೆಯ ಮೂಲೆಗಳಲ್ಲಿ ಸುಮಾರು ಐದು ಅಡಿ ಎತ್ತರವಾದ ನಾಲ್ಕು ಕಂಬಗಳಿವೆ. ಕಂಬಗಳು ಚೌಕಾಕಾರದ ಪೀಠದ ಮೇಲೆ ಪಾದ ಭಾಗವು ಚೌಕಾಕಾರವಾಗಿದೆ ದಂಡ ಭಾಗದ

ರಚನೆಗಳು ವೃತ್ತಾಕಾರದಲ್ಲಿವೆ ಕಮಲದೆಳಗಳು ಕೀರ್ತಿಮುಖ, ಮಣಿಹಾರಗಳು, ವಜ್ರಾಕೃತಿಗಳ ಮತ್ತು ಬಿಡಿ ಶಿಲ್ಪಗಳನ್ನು ಕಂಡಿರಿಸಲಾಗಿದೆ ತ್ರಿಕೋನ ಮಾದರಿಯ ಬೋದಿಗೆಗಳು ಒಂದು ಅಡಿ ದಪ್ಪ ಒಂದುವರೆ ಅಡಿ ಅಗಲದ ತೊಲೆಗಳನ್ನು ಹೊತ್ತಿವೆ. ಭತ್ತಿಯಲ್ಲಿ ನೃತ್ಯದಲ್ಲಿ ತೊಡಗಿರುವ ದೇವತೆಗಳ ಶಿಲ್ಪ, ಗಣೇಶ, ನಂದಿ ಹೊಬಳ್ಳಿಗಳು ಶಿಲ್ಪ ಕೆತ್ತನೆಗಳಿವೆ ಶಿವಲಿಂಗಕ್ಕೆ ಎದುರಾಗಿ ನಂದಿಯ ವಿಗ್ರಹವಿದೆ. ನವರಂಗ ದ್ವಾರವು ಮೂರು ಅಡಿ ಎತ್ತರವಾಗಿದ್ದು ಸರಳಾಕೃತಿಯ ರಚನೆಯಲ್ಲಿದೆ.

"ದೇವಾಲಯದ ಮುಂದೆ ಹನ್ನೆರಡು ಕಂಬಗಳಿಂದ ಕೂಡಿದ ತೆರೆದ ಮುಖ ಮಂಟಪವಿದೆ. ಇದರ ಸುತ್ತಲು ಕಕ್ಷಾಸನವಿದ್ದು ಇವು ಗಿಡ್ಡ (ಚಿಕ್ಕ) ಕಂಬಗಳಿಂದ ರಚನೆಗೊಂಡಿದೆ. ಹನ್ನೆರಡು ಕಂಬಗಳ ಅಂಕಣಗಳ ನಡುವೆ ಇದ್ದು ಅಂಕಣದಲ್ಲಿ ಅರಳಿದ ಕಮಲಗಳ ಶಿಲ್ಪ ಕೆತ್ತನೆಗಳಿವೆ. ಮುಖ ಮಂಟಪಕ್ಕೆ ಎರಡು ಕಡೆ ಪ್ರವೇಶ ದ್ವಾರಗಳಿವೆ"

ಪ್ರಾಚೀನ ಶಾಸನಗಳಲ್ಲಿ 'ಸುಲ್ಲಿಗ್ರಾಮ' ಮಹಾ ಅಗ್ರಹಾರ ಸಲ್ಯಗ್ರಾಮ' ಎಂದೆಲ್ಲಾ ಉಲ್ಲೇಖಿತಗೊಂಡಿರುವ ಈ ಊರಿಂದ ಈವರೆಗೆ ಮೂರು ಶಾಸನಗಳು ವರದಿಯಾಗಿವೆ. ಕ್ರಿ.ಶ. ೧೦೬೦ ರ ಶಾಸನವು ಈಶ್ವರ ದೇವಾಲಯದಲ್ಲಿದ್ದು ಕಲ್ಯಾಣದ ಚಾಳುಕ್ಯ ಅರಸ ಒಂದನೆಯ ಸೋಮೇಶ್ವರನ ಕಾಲಕ್ಕೆ ಸೇರಿದ್ದಾಗಿದ್ದು ಸುಲ್ಲಿಗ್ರಾಮ ಎಂಬ ಉಲ್ಲೇಖವಿದ್ದು ಹೆಚ್ಚಿನ ವಿವರಗಳು ಲಭಿಸುವುದಿಲ್ಲ. ಇನ್ನೆರಡು ಶಾಸನಗಳು ಕಲ್ಯಾಣದ ಚಾಳುಕ್ಯ ಅರಸ ಆರನೆಯ ವಿಕ್ರಮಾದಿತ್ಯನ ಕಾಲದ್ದಾಗಿದ್ದು ಬಹಳ ಹಾಳಾಗಿವೆ. ಇನ್ನೊಂದು 'ಅಗ್ರಹಾರ ಸುಲ್ಯ' ಗ್ರಾಮದ ಮಹಾರಾಜನ ಹಾಗೂ ಮತ್ತೊಂದು ಮಹಾಪ್ರಧಾನ ಮಲ್ಲಿಕಾರ್ಜುನ ಭಟ್ಟೋಪಾಧ್ಯಯರನ್ನು ಉಲ್ಲೇಖಿಸುತ್ತ ವೀರಭದ್ರ ದೇವರಿಗೆ ಭೂಮಿಯನ್ನು ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ" [೩]

**ಸ್ಥಳಿಯರೊಂದಿಗಿನ ಸಂದರ್ಶನ ಮಾಡಿದ ಮಾಹಿತಿ:**

ವೀರಭದ್ರ ದೇವಾಲಯದ ಪೂಜೆಯನ್ನು ಗ್ರಾಮದವರಾದ ಅರುಣಕುಮಾರವರು ಮಾಡುತ್ತಾರೆ. ಇವರನ್ನು ಮತ್ತು ಸ್ಥಳಿಯರಾದ ಚನ್ನಬಸಪ್ಪ ಉಮಾಶಂಕರ, ಬಸವರಾಜರನ್ನು ಸಂದರ್ಶಿಸಿದಾಗ ದೇವಾಲಯದ ಕುರಿತು ಮಾಹಿತಿಯನ್ನು ನೀಡಿದರು. ವೀರಭದ್ರ ದೇವಾಲಯವು ಬಹಳ ಪುರಾತನವಾಗಿದ್ದು ಗ್ರಾಮದ ಆರಾಧ್ಯ ದೈವನಾಗಿದ್ದಾನೆ ಎಂದು ಹೇಳಿದರು. ಗ್ರಾಮದ ಜನತೆ ಯಾವುದೆ ಜಾತಿಮತವಿಲ್ಲದೆ ದಿನಾಲು ದೇವರಿಗೆ ಬಂದು ದರ್ಶನ ಪಡೆಯುತ್ತಾರೆ. ಗ್ರಾಮದ ಸಮಸ್ತ ಜನತೆಯು ಕೂಡಿ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿ ಬಣ್ಣಗಳಿಂದ ಅಲಂಕರಿಸಿದ್ದಾರೆ. ದೇವಾಲಯದ ಉತ್ತರ ಗರ್ಭಗೃಹದಲ್ಲಿ ಚಿಕ್ಕ ಪ್ರವೇಶ ದ್ವಾರವಿರುವುದರಿಂದ ದೇವಾಲಯವು ದ್ವಿಕೂಟವಾಗಿ ಪರಿವರ್ತನೆಗೊಂಡಿವೆ. ಸ್ಥಳಿಯರನ್ನು ಚಿಕ್ಕದ್ವಾರದ ಬಗ್ಗೆ ಕೇಳಿದಾಗ ವೀರಭದ್ರನು ಈ ದ್ವಾರದ ಮೂಲಕವೇ ಬಂದನೆಂಬುದು ಎಲ್ಲರ ಪ್ರತಿ ಉತ್ತರವಾಗಿದೆ. ಒಂದು ಐತಿಹ್ಯ ಪ್ರಕಾರ ವೀರಭದ್ರನು ಇಲ್ಲಿಗೆ ಹೇಗೆ ಬಂದನು ಮತ್ತು ಯಾವುದಿನದಿಂದ ಬಂದಿದ್ದಾನೆಯೇ ಅಥವಾ ಮೊದಲಿನಿಂದಲೇ ಇಲ್ಲಿಯೇ ಇದ್ದಾನೋ ಯಾರಾದರೂ ಇದನ್ನು ಕತ್ತನೆ ಮಾಡಿ ಸ್ಥಾಪನೆ ಮಾಡಿದ್ದಾರೋ ಎಂದು ಕೇಳಿದಾಗ ಜನರು ಸ್ವಲ್ಪ ವೀರಭದ್ರನ ಮಾಹಿತಿ ನೀಡಿದರು ಅದೇನೆಂದರೆ.

ಈತನು ಸ್ಥಳನಾಮ ಕಲಕೋಡ (ಆಂಧ್ರ ಪ್ರದೇಶ) ತಾಂಡೂರು ತಾಲೂಕು ಒಂದು ಚಿಕ್ಕ ಹಳ್ಳಿಯಿಂದ ರಾಮತೀರ್ಥ (ಕರ್ನಾಟಕ) ಎಂಬ ಊರಿಗೆ ಬಂದನಂತೆ ಅದು ಹೇಗೆಂದರೆ ಅಲ್ಲಿ ಇತನಿಗೆ ಮಾಟ ಮಂತ್ರ ಮಾಡುತ್ತಿದ್ದರಂತೆ ಅದನ್ನು ಸಹಿಸಲಾರದೆ ರಾತ್ರೋರಾತ್ರಿ ಓಡಿ ಬಂದು ರಾಮತೀರ್ಥ ಮತ್ತು ಸುಲೇಪೇಟ ನಡುವೆ ಬಂದು ಹಳ್ಳದ (ಭಾವಿ) ದಂಡಿಯಲ್ಲಿ ಮಲಗಿದನಂತೆ ಆಗ ವಡ್ಡರ ವ್ಯಕ್ತಿಯೊಬ್ಬ ಬಾಯಾರಿಕೆ ಆಗಿದಾಗ ಬಾವಿಯ ಹತ್ತಿರ ನೀರು ಕುಡಿಯಲು ಹೋದಾಗ 'ನಾನು ಬರುತ್ತೇನೆ' 'ನಾನು ಬರುತ್ತೇನೆ' ನನ್ನನ್ನು ಕರೆದುಕೊಂಡು ಹೋಗು ಎಂದು ಪ್ರತಿಧ್ವನಿ ಬರುತ್ತಿತಂತೆ ಆಗ ಆ ವ್ಯಕ್ತಿ ಭಯದಿಂದ ಓಡಿ ಬಂದು ಊರ ಜನರ ಹತ್ತಿರ ಅಲ್ಲಿ ಆದ ವಿಷಯ ತಿಳಿಸಿದನಂತೆ ಆಗ ಊರಿನ ಜನರೆಲ್ಲ ಸೇರಿ ನಡಿ ನೋಡೋಣ ಎಂದು ಆ ವ್ಯಕ್ತಿಯನ್ನು ನಮ್ಮೊಂದಿಗೆ ಕರೆದುಕೊಂಡು ಹೋದರು ಅಲ್ಲಿ ಮತ್ತೆ ನಾನು ಬರುತ್ತೇನೆ ನಾನು ಬರುತ್ತೇನೆ ಎಂದು ಪ್ರತಿಧ್ವನಿ ಕೂಳಿ ಬರಲು ಪ್ರಾರಂಭಿಸಿದಂತೆ ಆಗ ಊರಿನ ಹಿರಿಯರಾದವರು ಯಾರು ನೀನು ಎಲ್ಲಿಂದ ಬಂದಿರುವೆ ಏಕೆ ಹೀಗೆ ಕೂಗಾಡುತ್ತಿರುವೆ ಎಂದು ಕೇಳಿದಾಗ ತನಗೆ ಆದ ಘಟನೆಗಳು ತಿಳಿಸಿದನಂತೆ ವೀರಭದ್ರ. ಇದನ್ನೆಲ್ಲ ಅರಿತ ಜನರು ವೀರಭದ್ರನನ್ನು ಕರೆದು ತರಲು ಕೋಣದ ಬಂಡಿ ತೆಗೆದುಕೊಂಡು ಹೋದರಂತೆ ಆಗ ರಾಮತೀರ್ಥ ಹಳ್ಳಿಯವರು ದೇವರು ನಮ್ಮ ಊರಿನ ಹಾದಿಯಲ್ಲಿ ಇದ್ದಾನೆ ನಾವು ಕರೆದುಕೊಂಡು ಹೋಗುತ್ತೇವೆ ಎಂದು ನಾವು ಎಂದು ಎರಡು ಊರಿನವರು ಕಿತ್ತಾಡುವಾಗ ವೀರಭದ್ರನು ಸುಲೇಪೇಟ ಗ್ರಾಮದ ಕೋಣಗಳಿಂದ ಕಟ್ಟಿದ ಬಂಡಿಯ ಮೇಲೆ ಕುಳಿತುಕೊಂಡನಂತೆ ಅದನ್ನು ಕಂಡು ಎಲ್ಲ ಜನರು ಶಾಂತರಾಗಿರಿ ನಡೆಯಿರಿ ಆತನ ಆಜ್ಞೆ ಬಂದಿದೆ ನಾವೆಲ್ಲರೂ ಏನು ಮಾಡಿದರು ಆಗುವುದಿಲ್ಲ ಎಂದು ವೀರಭದ್ರನನ್ನು ಭಜನೆ ಮೇಳದಿಂದ ಸಂಭ್ರದಿಂದ ಕರೆದುಕೊಂಡು ಊರ ಅಗಸಿ ಹತ್ತಿರ ತಂದರು ಇತನನ್ನು ಎಲ್ಲಿ ಕೂಡಿಸಬೇಕು ಎಂದು ಆಲೋಚನೆ ಮಾಡುವಾಗ ಬಂಡೆಯ ಕೀಲು ಮುರಿಯುತ್ತಂತೆ ಆಗ ವೀರಭದ್ರನು ದಕ್ಷಿಣಭಿಮುಖವಾಗಿ ಅಲ್ಲಿಯ ನೆಲೆಸಿಕೊಂಡನು ಎಂಬ ಪ್ರತೀತಿ ಇಲ್ಲಿ ಪ್ರಚಲಿತದಲ್ಲಿದೆ.

ಶ್ರೀ ವೀರಭದ್ರನು ಶಾಶ್ವತವಾಗಿ ಇಲ್ಲಿಯೇ ನೆಲೆ ನಿಂತರು ಎಂಬ ಪುರಾತನ ಕಥೆ ಇಂದಿಗೂ ಜನ ಜನಿತವಾಗಿದೆ. ಗ್ರಾಮದ ಸಮಸ್ತ ಜನರು ಕೂಡಿಕೊಂಡು ಯಾವುದೇ ಜಾತಿ ಮತ ಭೇದ ಭಾವವಿಲ್ಲದೆ ಪ್ರತಿವರ್ಷ ಯುಗಾದಿ ದಿನ ಒಂದು ತಿಂಗಳ ಪರ್ಯಾಂತರವಾಗಿ ಜಾತ್ರೆ ನಡೆಯುತ್ತದೆ. ಪ್ರತಿನಿತ್ಯ ವೀರಭದ್ರೇಶ್ವರ ಗುಡಿಯಿಂದ ಸಂಗಮೇಶ್ವರ ದೇಗುಲಕ್ಕೆ ಉತ್ಸವ ಮೂರ್ತಿ ಪಲ್ಲಕ್ಕಿ ಹಾಗೂ ಉಚ್ಛಾಯಿಯನ್ನು ವಾದ್ಯ ಮೇಳಗಳಿಂದ ಮೇರವಣಿಗೆಯಿಂದ ಜಾತ್ರೆಯನ್ನು ಆಚರಿಸುತ್ತಾರೆ. ಸುತ್ತ ಮುತ್ತಲಿನ ಗ್ರಾಮದವರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಬಂದು ದೇವರ ದರ್ಶನ ಪಡೆಯುತ್ತಾರೆ. ಕೊನೆಯ ದಿನದಂದು ಸಾಯಂಕಾಲ ರಥೋತ್ಸವ ಜರುಗುತ್ತದೆ. ಗ್ರಾಮದ ಉತ್ಸವದಲ್ಲಿ ಸುತ್ತಮುತ್ತಲಿನ ಗ್ರಾಮದ ಜನರು ಸಾಲುಸಾಲಾಗಿ ಬಂದು ಸೇರಿ ಉತ್ಸವವನ್ನು ಸಂತೋಷದಿಂದ ನೋಡಿ ಆನಂದಿಸುತ್ತಾರೆ. ದೇವರಿಗೆ ಕಾಯಿ ಕರ್ಪೂರ ನೈವ್ಯದ್ಯವನ್ನು ಅರ್ಪಿಸಿ ತಮ್ಮ ಮನೆಗೆ ಪ್ರಸಾದವನ್ನು ತೆಗೆದುಕೊಂಡು ಸಂತೋಷದಿಂದ ಹೊರಡುತ್ತಾರೆ ವೀರಭದ್ರನ ಮಹೋತ್ಸವ ಅದ್ದೂರಿಯಾಗಿ ನಡೆಯುತ್ತಿದೆ" [೪]

**ದರ್ಶನ ನೀಡಿದ್ದು:**

ಪ್ರಭಾವಳಿ ಉತ್ಸವದಲ್ಲಿ ದೇವರನ್ನು ಪ್ರತಿಷ್ಠಾಪಿಸಲು ದೇವರನ್ನು ದೇವಾಲಯದಿಂದ ಕರೆತಂದ ಮೇಲೆ ದೇವಾಲಯಕ್ಕೆ ಬೀಗ ಹಾಕಲಾಗುತ್ತದೆ. ಈ ಸಮಯದಲ್ಲಿ ದೇವರ ದರ್ಶನ ನಿಷಿದ್ದ ಯಾರಾದರೂ ದರ್ಶನದ ಪ್ರಯತ್ನ ನಡೆಸಿದಂತೆ ಆಪತ್ತು ಕಟ್ಟಿಟ್ಟ ಬುತ್ತಿ ಎನ್ನುತ್ತಾರೆ ಓಮಣ ನೇಳಗೆಯವರು ಹಳೆವಾರು ಹೊಸ ಊರಿನ ಯುವ ಭಕ್ತರು ಎರಡು ಗುಂಪಾಗಿ ನಡೆನುಡಿ ಪ್ರಭಾವಳಿ ಉತ್ಸವ ಈ ಜಾತ್ರೆಯ ಪ್ರಮುಖ ಆಕರ್ಷಣೆ ಎಲ್ಲರೂ ಬಿಳಿ ಬನೆಯನ ಬಿಳಿ ಲುಂಗಿ, ಕೆಂಪು ಟವೇಲು ಧರಿಸಿ ಪ್ರಭಾವಳಿ ಹೊತ್ತು ನಡೆಯುವ ದೃಶ್ಯ ಭಕ್ತಾದಿಗಳಿಂದ ಭಕ್ತಿಯ ಅಭಿವ್ಯಕ್ತಿಯಾಗಿದೆ.

ವೀರಭದ್ರನ ರಥೋತ್ಸವದ ಹಿಂದಿನ ದಿನ ಆತನಿಗೆ ಹರಕೆ ಮಾಡಿರುವುದನ್ನು ಎಲ್ಲರೂ ತೀರಿಸುತ್ತಾರೆ ಹಾಗೆ ಊರಲ್ಲಿ ಮದುವೆ ಸಮಾರಂಭಗಳು ಯುಗಾದಿ ಹಬ್ಬದವರೆಗೆ ಮಾತ್ರ ಮಾಡುತ್ತಾರೆ. ನಂತರ ಯುಗಾದಿ ಹಬ್ಬದ ನಂತರ ಬಸವ ಜಯಂತಿಯವರೆಗೆ ಯಾರು ಮನೆಯಲ್ಲಿ ಮದುವೆಗಳನ್ನು ಮಾಡುವುದಿಲ್ಲ ಮತ್ತು ಹೊಸ ಬಟ್ಟೆಗಳನ್ನು ಧರಿಸುವಂತಿಲ್ಲ. ದೇವರ ಜಾತ್ರೆ ಮುಗಿದ ನಂತರವೇ ಊರಲ್ಲಿ ಮದುವೆಗಳು ನಡೆಯುತ್ತವೆ. ಜಾತ್ರೆಯ ದಿನದಂದು ಅಗ್ನಿಕುಂಡವನ್ನು ತಯಾರಿಸುತ್ತಾರೆ. ಅಂದರೆ ಒಂದು ಕುಂಡದಲ್ಲಿ ಕಟ್ಟಿಗೆಗಳಿಂದ ಸುಟ್ಟು ಬೆಂಕಿಯನ್ನು ತಯಾರಿಸುತ್ತಾರೆ ಜನರು ತಮಗೆ ಕಷ್ಟ ಬಂದಾಗ ಅಥವಾ ತಮಗೆ ಆಗಬೇಕಾದ ಹರಕೆಯನ್ನು ಆಗಲಿ ಎಂದು ನಾನು ನಿನ್ನ ಜಾತ್ರೆಯ ದಿನದಂದು ಅಗ್ನಿಯನ್ನು ತುಳಿಯುತ್ತೇನೆ ಎಂದು ಹರಕೆ ಹೊತ್ತುಕೊಂಡುವರು ಅಂದು ಆ ಅಗ್ನಿಯನು ಪ್ರವೇಶಿಸುತ್ತಾರೆ. ಇಲ್ಲಿ ಚಮತ್ಕಾರವೆನೆಂದರೆ ಅಂತಹ ಸುಡು ಬೆಂಕಿಯಲ್ಲಿ ಜೈ ವೀರಭದ್ರ ಎಂದು ನಾಮವನ್ನು ಪಟಿಸುತ್ತ ಅಗ್ನಿ ಪ್ರವೇಶ ಮಾಡಿದಾಗ ಯಾರಿಗೂ ಸಹ ಇಲ್ಲಿಯವರೆಗೆ ಒಂದು ಚಿಕ್ಕ ಗಾಯ, ಹಾನಿಯಾಗಿಲ್ಲವೆಂದು ತಿಳಿದು ಬಂದಿದೆ. ಮತ್ತು ಇಲ್ಲಿ ಕೆಲವು ಸಾಂಸ್ಕೃತಿಕ ಕಾರ್ಯಕ್ರಮಗಳು ಇಲ್ಲಿ ಮಾಡಲಾಗುತ್ತದೆ. ಕುಸ್ತಿ, ವಚನ, ಗಾಯನ, ರಂಗೋಲಿ ಸ್ಪರ್ಧೆಗಳನ್ನು ಏರ್ಪಡಿಸಿ ಗೆದ್ದವರಿಗೆ ಬಹುಮಾನವನ್ನು ನೀಡಲಾಗುತ್ತದೆ. ಜಾಗೃತ ದೇವರೆಂದು ಸುಲೇಪಟದ ವೀರಭದ್ರ ದೇವರು ಪ್ರಸಿದ್ಧಿಯಾಗಿದ್ದಾನೆ.

**೪.೩ ರಾಮಲಿಂಗೇಶ್ವರ ದೇವಸ್ಥಾನ ಚರಿತ್ರೆ – ಮೋಘಾ :**

| | | |
|---|---|---|
| ಗ್ರಾಮದ ಹೆಸರು | – | ಮೋಘಾ ತಾ॥ ಚಿಂಚೋಳಿ ಜಿ॥ ಗುಲ್ಬರ್ಗ |
| ದೇವಸ್ಥಾನದ ಹೆಸರು | – | ರಾಮಲಿಂಗೇಶ್ವರ ದೇವಾಲಯ |
| ದೇವಸ್ಥಾನದ ಕಾಲಮಾನ | – | ಸುಮಾರು 11ನೇ ಶತಮಾನ |
| ರಾಜಕೀಯ ಮನೆತನ | – | ಕಳಚೂರಿ |
| ಅರಸ | – | ಬಾಣ ವಂಶ |
| ದೇವಸ್ಥಾನದ ಶೈಲಿ | – | ಕಲ್ಯಾಣಿ ಚಾಲುಕ್ಯ |
| ದೇವಸ್ಥಾನದ ದಿಕ್ಕು | – | ಪೂರ್ವಾಭಿಮುಖ |
| ಪ್ರಸ್ತುತ ಸ್ಥಿತಿಗತಿ | – | ಶಿಥಿಲ ವ್ಯವಸ್ಥೆ |

| | | |
|---|---|---|
| ದೇವಸ್ಥಾನದ ಸ್ಥಳ | - | ಊರಿಂದ ೨ ಕಿ.ಮೀ. ದೂರ ಶಾಂತವಾದ ಹೊಲದಲ್ಲಿ |
| ಪ್ರಸ್ತುತ ಇರುವ ಭಾಷೆ | - | ಕನ್ನಡ |
| ಊಡುಗೆ ತೊಡುಗೆ | - | ಸೀರೆ, ಪಂಚೆ |
| ಜನರ ಉದ್ಯೋಗ | - | ಕೃಷಿ |

**ರಾಮಲಿಂಗೇಶ್ವರ ದೇವಾಲಯ ಮೋಘಾ:**

ಹಿಂದುಳಿದ ಪ್ರದೇಶವೆಂದು ಹಣೆಪಟ್ಟಿ ಕಟ್ಟಿಕೊಂಡಿರುವ ಕಲಬುರಗಿ ಜಿಲ್ಲೆಯು ಐತಿಹಾಸಿಕವಾಗಿ ಶ್ರೀಮಂತಿಕೆಯನ್ನು ಪಡೆದಿದೆ. ಇಲ್ಲಿ ಅನೇಕ ಕಲೆ, ವಾಸ್ತು ಶಿಲ್ಪಗಳಿಂದ ಕೂಡಿದ ದೇವಾಲಯಗಳಿವೆ. ಪ್ರಚಾರ ಚಾರಿತ್ರಿಕ ಪ್ರಜ್ಞೆಯ ಕೊರತೆಯಿಂದ ಬೆಳಕಿಗೆ ಬಾರದೆ ಕಾಲಗರ್ಭದಲ್ಲಿ ಉಳಿದು ಅವನತಿಯತ್ತ ಸಾಗಿವೆ. ಹಗರಟಗಿ, ಶಿರವಾಳ, ಕಾಳಗಿ, ಚಿಂಚನಸೂರ ಹೀಗೆ ಅನೇಕ ಕಡೆ ಪುರಾತನ ದೇವಾಲಯಗಳು ಸಾಂಸ್ಕೃತಿಕ ಸಂಪನ್ನತೆಗೆ ಸಾಕ್ಷಿಯಾಗಿವೆ.

ಕಲಬುರಗಿ ಜಿಲ್ಲೆಯು ಚಿಂಚೋಳಿ ತಾಲೂಕಿನ ಮೋಘಾ ಚಾರಿತ್ರಿಕ ಹಿನ್ನಲೆಯ ಗ್ರಾಮವಾಗಿದೆ. ಈ ಊರಿಗೆ ಸ್ಥಳಿಯರು ಮಗಿ ಎಂದು ಕರೆಯುತ್ತಾರೆ. ಇದು ಅನಾದಿ ಕಾಲದಿಂದಲೂ ಅಗ್ರಹಾರವಾಗಿದೆ. ಶಾಸನಗಳಲ್ಲಿ ನಾವು ಕಂಡಾಗ ಮೊರಘ, ಮೈಗೆ ಎಂದು ಕರೆದಿದ್ದಾರೆ ಇದು ಮನ್ನೆದಡಿ ಸಾಸಿರನಾಡಿನಲ್ಲಿ ಸಮಾವೇಶವಾಗುತ್ತದೆ. ಬಸವಾದಿ ಶಿವಶರಣರಲ್ಲಿರುವ ಮಗ್ಗೆಯ ಮಾಯದೇವರು ಇಡೀ ಊರಿನವರಾಗಿದ್ದಾರೆ. ಹಾರಕೂಡ ಹಿರೇಮಠದ ಲಿಂಗೈಕ್ಯರಾದ ಚನ್ನಬಸವ ಶಿವಚಾರ್ಯರಿಗೆ ಜನ್ಮಕೊಟ್ಟ ಜನ್ಮಭೂಮಿಯಾಗಿದೆ.

ಮೋಘಾ ಗ್ರಾಮವು ತಾಲೂಕು ಕೇಂದ್ರವಾದ ಚಿಂಚೋಳಿಯಿಂದ ಪಶ್ಚಿಮಕ್ಕೆ ೨೭ ಕಿ.ಮೀ. ದೂರದಲ್ಲಿರುವ ಒಂದು ಐತಿಹಾಸಿಕ ಚಾರಿತ್ರಿಕ ಊರಾಗಿದೆ.

ಮೋಘಾ ರಾಮಲಿಂಗೇಶ್ವರ ದೇಗುಲದಿಂದ ಪ್ರಸಿದ್ಧವಾಗಿದೆ. ನಿಸರ್ಗ ಸುಂದರ ರಮಣೀಯ ಪರಿಸರದಲ್ಲಿ ನಿರ್ಮಾಣಗೊಂಡಿದೆ ಭಕ್ತರಿಗೆ ಹೋಗಿ ಬರಲು ಸಂಚಾರ ವ್ಯವಸ್ಥೆ ಸುಗಮ ಮತ್ತು ಸರಳವಾಗಿ ಇದೆ. ಗೋಪುರದ ಶೈಲಿಯಿಂದ ಉತ್ತರ ಭಾರತದ ದೇವಾಲಯವನ್ನು ನೋಡಿದ ಅನುಭವ ಪ್ರೇಕ್ಷಕರಿಗೆ ಆಗುತ್ತದೆ. ಶಾಸನದಲ್ಲಿ ಈ ದೇವಾಲಯವನ್ನು ಸ್ವಯಂಭು ರಾಮನಾಥ ದೇವಾಲಯವೆಂದು ಹೆಸರಿಸಲಾಗಿದೆ. ಸದರಿ ದೇವಾಲಯದ ನವರಂಗದಲ್ಲಿ ತುಂಡಾಗಿ ಬಿದ್ದಿರುವ ಶಾಸನವು ಕಳಚೂರಿ ಅರಸರ ಕಾಲಕ್ಕೆ ಸೇರಿದ್ದಾಗಿರುತ್ತದೆ. ಕ್ರಿ.ಶ. ೧೧೭೦ ರಲ್ಲಿ ಅನಾದಿ ಕಾಲದಿಂದ ಅಗ್ರಹಾರದಲ್ಲಿ ಸ್ವಯಂಭು ರಾಮನಾಥ ದೇವಾಲಯ ರಾಮತೀರ್ಥವನ್ನು ವಾಸಪ್ಪಯ್ಯ ದಂಡನಾಯಕ ಕಟ್ಟಿಸಿದ ವಿಷಯ ತಿಳಿದು ಬರುತ್ತದೆ.

ಮನ್ನೆರಡಿಸಾಸಿರನಾಡನ್ನು ಆಳುತ್ತಿದ್ದ ಬಾಣವಂಶದ ಮಹಾಮಂಡಳೇಶ್ವರ ವೀರಗೊಂಕರಸ, ರಾಣಿ ಮೈಳಲದೇವಿ ಹಾಗೂ ಕುಮಾರಮಲ್ಲ ದೇವರು ಮೈಗೆಯ

ರಾಮನಾಥ ದೇವಾಲಯಕ್ಕೆ ದಾನ ದತ್ತಿಕೊಟ್ಟ ವಿಷಯಗಳನ್ನು ಈ ಶಾಸನ ಒಳಗೊಂಡಿದೆ ಈ ಶಾಸನೊಕ್ತ ರಾಮನಾಥ ದೇವಾಲಯವೇ ಇಂದಿನ ರಾಮಲಿಂಗೇಶ್ವರ ದೇವಾಲಯವಾಗಿದೆ.

ಪೂರ್ವಕ್ಕೆ ಮುಖ ಮಾಡಿರುವ ದೇವಾಲಯವು ಎತ್ತರ ಜಗುಲಿಯ ಮೇಲೆ ಬಹುಕೊನಾಕಾರದ ತಳ ವಿನ್ಯಾಸವನ್ನು ಹೊಂದಿದೆ. ಗರ್ಭಗುಡಿ ತೆರೆದ ಅಂತರಾಳ ನವರಂಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಬಾಗಿಲವಾಡವು ಪಂಚಣಲಂಕೃತವಾಗಿದೆ. ಅಚಿತರಾಳದಲ್ಲಿ ದೇವಕೋಷ್ಠಕ ಮತ್ತು ಗಣಪತಿಯ ವಿಗ್ರಹಗಳಿವೆ. ನವರಂಗದಲ್ಲಿ ನಾಲ್ಕು ದೇವಕೋಷ್ಠಕಗಳಿದ್ದು, ಅಲ್ಲಿ ಸಪ್ತ ಮಾತೃಕೆ ಮತ್ತು ಮಹಿಷಾಸುರ ಮರ್ದಿನಿಯರ ಶಿಲ್ಪಗಳಿವೆ. ನವರಂಗದ ಕಂಬಗಳ ಮೇಲೆ ಬ್ರಹ್ಮ, ವಿಷ್ಣು, ನಟರಾಜ, ಸರಸ್ವತಿ, ಗಣೇಶ, ಭೈರವಿ, ಸೂರ್ಯ ಹಾಗೂ ನಾಟ್ಯಗಾರ್ತಿಯರ ಚೆಲುವಿನ ಶಿಲ್ಪಗಳಿವೆ. ನವರಂಗದಲ್ಲಿ ಕುಳಿತುಕೊಳ್ಳಲು ಆಸನಗಳಿವೆ. ಬಲಗಡೆಯ ಮಂಟಪದಲ್ಲಿ ಮಾಳಚಿಯ ಮೂರ್ತಿಯಿದೆ. ಹೊರಭಿತ್ತಿಯು ಮಾರುಕಡೆಯಲ್ಲಿ ದೇವಕೋಷ್ಠಕಗಳಿದ್ದು, ಬ್ರಹ್ಮ, ವಿಷ್ಣು, ಮಹೇಶ್ವರ ಶಿಲ್ಪಗಳಿವೆ.

ದೇಗುಲವು ಔತ್ಯರೇಯ (ಭೂಮಿಜ) ಶಿಖರವನ್ನು ಹೊತ್ತು, ನೋಡಲು ಭವ್ಯವು ದಿವ್ಯವು ಆಗಿದೆ. ದೇವಾಲಯದ ಮುಂದಿನ ಎಡ ಭಾಗದಲ್ಲಿ ಮೂರು ನೀರಿನ ಹೊಂಡಗಳಿವೆ ತೀರ್ಥಗುಂಡ, ಅಮೃತ ಗುಂಡ, ಕೇರಗುಂಡಗಳೆಂದು ಅವುಗಳನ್ನು ಕರೆಯುತ್ತಾರೆ. ಒಂದರಲ್ಲಿ ಅನಂತ ಪದ್ಮನಾಭ ಸ್ವಾಮಿಯ ವಿಷ್ಣುವಿನ ಎರಡು ಶಿಲ್ಪಗಳಿವೆ ಹೊಂಡಗಳ ಮಾಡಗಳಲ್ಲಿ ವಿಷ್ಣುವಿನ ಸೊಗಸಾದ ವಿವಿಧ ಭಂಗಿಯ ಮೂರ್ತಿಗಳಿವೆ. ದೇವಾಲಯಕ್ಕೆ ಪ್ರವೇಶಿಸಲು ಮೂರು ಪ್ರಮುಖ ಮಹಾದ್ವಾರಗಳಿವೆ ಗೋಪುರದ ನಾಲ್ಕು ಕಡೆ ನರಸಿಂಹ ಮೂರ್ತಿಗಳಿವೆ. ಗೋಪುರದ ಮೇಲ್ಭಾಗದಲ್ಲಿ ಗವಿಯಿದೆ. ಈ ಗವಿಯಲ್ಲಿ ಅನೇಕ ಮಹಾಮಹಿಮರು ಜಪತಪ ಅನುಷ್ಠಾನಗೈದಿರುವ ಪ್ರಮುಖ ಜಾಗೃತ ಸ್ಥಾನವಾಗಿದೆ. ದೇವಾಲಯದ ರಂಗಮಂಟಪದಲ್ಲಿರುವ ನಂದಿ ಭಿನ್ನವಾಗಿದ್ದುದರಿಂದ ಹೊಸ ನಂದಿಯನ್ನು ಸ್ಥಾಪಿಸಲಾಗಿದೆ. ದೇವಾಲಯದ ಹಿಂಬದಿಯಲ್ಲಿ ನಿರಂತರ ಜಲಧಾರೆ ಪ್ರವೇಶಿಸುತ್ತದೆ.

ಆಷಾಡ ಮಾಸದಲ್ಲಿ ಕರ್ನಾಟಕ, ಆಂಧ್ರ, ಮಹಾರಾಷ್ಟ್ರಗಳಿಂದ ಭಕ್ತರು ಆಗಮಿಸಿ, ಮೃಸ್ಟಾನ್ನ ಭೋಜನ ವಿತರಿಸಿ, ಪ್ರಸಾದರೂಪದಲ್ಲಿ ತಾವು ಸ್ವೀಕರಿಸಿ ಸಂತುಷ್ಟರಾಗುತ್ತಾರೆ. ದಿಗಂಬರ ವಾಮದೇವ ಮಹಾರಾಜರು, ಹಾರಕೂಡ ಚೆನ್ನಬಸವ ಶಿವಾಚಾರ್ಯರು, ಭರತೂರಿನ ಗುರುನಂಜೇಶ್ವರರು, ಹಾಲ್ಮಠದ ಪೂಜ್ಯರು ಹಾಗೂ ನೀಲಕಂಠ ಮಹಾಸ್ವಾಮಿಗಳು ರಟಗಲ್ ಇತ್ಯಾದಿ ಜಂಗಮ ಪುಂಗವರು ತಪಸ್ಸು ಮಾಡಿ ಸಿದ್ಧಿ ಪಡೆದ ಅವಿನಾಶಿ ಕ್ಷೇತ್ರವಾಗಿದೆ. ಮಗ್ಗೆಯ ಮುನಿಯ ತಪ್ಪಸ್ಸಿಗೆ ಮೆಚ್ಚಿದ ರಾಮದೇವರು ರಾಮನಾಥನಾಗಿ ಈ ಸ್ಥಳದಲ್ಲಿ ಸ್ವಯಂಭು ಆಗಿ ಕಂಗೊಳಿಸಿದ್ದಾರೆ. ಮಗ್ಗೆಯ ಮಾಯಿದೇವರು ರಚಿಸಿದ ವಚನಗಳು ಭಾತೂರಿನ ಗುರುನಂಜೇಶ್ವರ ಮಠದಲ್ಲಿ ಈಗಲೂ ದೊರೆಯುತ್ತದೆ. ಪ್ರತಿವರ್ಷ ರಾಮ ನವಮಿಯ ದಿವಸ ರಾಮಲಿಂಗೇಶ್ವರ ಜಾತ್ರೆ ವೈಭವದಿಂದ ಜರಗುತ್ತದೆ. ಕಂಟಕ ಪೀಡಿತರಾದ ಭಕ್ತರು ದೇವಾಲಯ ದರ್ಶನ ಮಾಡಿ ಹೊಂಡದ ನೀರನ್ನು ಸೇವಿಸುವುದರಿಂದ ಕಂಟಕ ಮಾಯಾವಾಗುತ್ತದೆ ಎಂಬ ನಂಬಿಕೆ ಇದೆ" [೫]

## ೪.೪ ಪಾಂಡುರಂಗ ವಿಠ್ಠಲನ ದೇವಸ್ಥಾನ ಹಲಕೂಡ :

| | | |
|---|---|---|
| ಗ್ರಾಮದ ಹೆಸರು | – | ಹಲಕೂಡ ತಾ॥ ಚಿಂಚೋಳಿ ಜಿ॥ ಗುಲ್ಬರ್ಗ |
| ದೇವಾಸ್ಥಾನದ ಹೆಸರು | – | ವಿಠ್ಠಲ ರುಕ್ಮಿಣಿ ದೇವಾಸ್ಥಾನ |
| ಕಾಲಮಾನ | – | ಸುಮಾರು 500 ವರ್ಷಗಳಿದ್ದು 15/16ನೇ ಶತಮಾನ |
| ದೇವಾಸ್ಥಾನದ ಕಟ್ಟಡ | – | ಸಾಧರಣವಾಗಿದೆ |
| ಪ್ರಸ್ತುತ ಮೇಲ್ವಿಚಾರಣೆ | – | ಸ್ಥಳೀಯರ ವತಿಯಿಂದ |
| ಭಾಷೆ | – | ಕನ್ನಡ, ತೆಲುಗು |
| ಪ್ರಸ್ತುತ ದೇವಾಸ್ಥಾನ ಕಟ್ಟಡ | – | ಜೀರ್ಣೋದ್ಧಾರಗೊಂಡಿದೆ |

ಕಲಬುರಗಿ ಜಿಲ್ಲೆಯ ಚಿಂಚೋಳಿ ತಾಲೂಕಿನಿಂದ 28 ಕಿ.ಮೀ. ದೂರದಲ್ಲಿರುವ ಹಲಕೋಡ ಎಂಬ ಗ್ರಾಮವಿದೆ. ಇಲ್ಲಿ ಸಿದ್ದೇಶ್ವರ ದೇವಸ್ಥಾನ ಅತಿ ಪ್ರಾಚೀನ ಕಾಲದಿಂದಲೂ ಇದೆ. ಇಲ್ಲಿ ನಾವು ನೋಡಬಹುದಾದ ಒಂದು ಸುಂದರ ದೇವಸ್ಥಾನವೆಂದರೆ ಪಾಂಡುರಂಗ ರುಕ್ಮಿಣಿಯ ದೇವಾಸ್ಥಾನ. ಈ ದೇವಾಸ್ಥಾನವು ಸುಮಾರು 500 ವರ್ಷಗಳ ಹಿಂದೆಯೇ ಸ್ಥಾಪನೆಗೊಂಡಿದೆ. ಗರ್ಭಗೃಹವು ಚಿಕ್ಕದಾಗಿದೆ ಅದರಲ್ಲಿ ದೇವರನ್ನು ಕೂಡಿಸಲು ಅಂದು ಜಗಲಿ ಎಂದು ಕರೆಯುತ್ತಿದ್ದರು. ಅದು ಸಮಾನವಾಗಿ 8 ಅಡಿ ಎತ್ತರವಾಗಿದೆ. ಗರ್ಭಗೃಹದಲ್ಲಿ ಅಕ್ಕಪಕ್ಕದಲ್ಲಿ ಎರಡು ಮಾಡಗಳಿವೆ ಗರ್ಭಗೃಹದ ಬಾಗಿಲು ಅತಿ ಚಿಕ್ಕದಾಗಿದೆ. ಒಳಗಡೆ ಹೋಗಲು ನಾವು ತಲೆಬಾಗಿ ಹೋಗಬೇಕಾಗುತ್ತದೆ. ಒಂದು ಸುಂದರ ನವರಂಗವನ್ನು ಹೊಂದಿದ. ಗರ್ಭಗೃಹದ ಮುಂದೆ ಎರಡು ಕಂಬಗಳು ಇವೆ. ನವರಂಗದ ಮೇಲೆ ಸುಂದರವಾಗಿ ಆಕಾರವನ್ನು ಕೆತ್ತಲಾಗಿದೆ. ಮುಂದೆ ಅಂಗಳ ಇದೆ. ಗುಡಿಯ ಸುತ್ತ ಮುತ್ತಲು ದುಂಡು ಮಲ್ಲಿಗೆಯ ಗಿಡಗಳನ್ನು ನೆಡಿಸಿದ್ದಾರೆ. ಆ ಗಿಡಗಳಲ್ಲಿ ಯಾವಗಲೂ ಹೂಗಳು ಅರಳಿ ಸುಂದರ ಪರಿಮಳವನ್ನು ನೀಡುತ್ತಾ ಇರುತ್ತವೆ. ಪಕ್ಕದಲ್ಲಿ ಇನ್ನೊಂದು ದೇವಾಸ್ಥಾನವಿದೆ. ಅದರಲ್ಲಿ ನಾಗರಶಿಲ್ಪವಿದೆ ಮತ್ತು ಗಣಪತಿಯ ಮೂರ್ತಿಯ ಕೆತ್ತನೆ ಇದೆ ಎರಡು ಹೆಡೆಯ ನಾಗರಹಾವು ಒಂದಕ್ಕೊಂದು ಸುತ್ತುಕೊಂಡಿವೆ. ದೇವಾಸ್ಥಾನದ ಸುತ್ತಲೂ ಪ್ರಕಾರಾದ ಗೋಡೆಯಿಂದ ಕಟ್ಟಿಸಲಾಗಿದೆ. ಈ ದೇವಾಸ್ಥಾನಕ್ಕೆ ಏಳು ಬಾಗಿಲಿನಿಂದ ಹೋಗಲು ದಾರಿಯಿದೆ. ದೇವಸ್ಥಾನವು 4 ಎಕರೆ ಹೊಲವನ್ನು ಆವರಿಸಿಕೊಂಡಿದೆ ದೇವಾಸ್ಥಾನ ಚಿಕ್ಕದಿದೆ ಆದರೆ ಸುತ್ತಲೂ ಅಂಗಳದಿಂದ ಕೂಡಿದ. ಈ ದೇವಸ್ಥಾನಕ್ಕೆ ಹೋಗಲು ಒಂದು ದೊಡ್ಡ ದ್ವಾರ ಬಾಗಿಲವು ಇದೆ.

### ಗ್ರಾಮಸ್ಥರಿಂದ ತಿಳಿದ ಮಾಹಿತಿ:

ಪಾಂಡುರಂಗ ಹೇಗೆ ಇಲ್ಲಿ ನೆಲೆಸಿದನು ಎಂದು ವಿಚಾರಿಸಿದಾಗ ಇದರ ಹಿಂದೆ ಒಂದು ದೊಡ್ಡ ಕಥೆಯೇ ಆವರಿಸಿಕೊಂಡಿದೆ ಎಂದು ಹೇಳಿದರು ಆಗ ನಾನು ಕುತೂಹಲದಿಂದ ಕೇಳಿದಾಗ ದೇವಾಸ್ಥಾನದ ದಿನನಿತ್ಯ ಪೂಜೆ ಮಾಡುವ ವಿಠ್ಠಲ ಮಹಾರಾಜ ಮತ್ತು ಅದೇ ಊರಿನವರಾದ ಶಿವನಾಗೇಂದ್ರ ಪಾಟೀಲ ಅವರಿಂದ ಹೀಗೆ ವಿವರಿಸಿ ಹೇಳತೊಡಗಿದರು.

ಶ್ರೀ ಗುರು ಜಯಮಹಾರಾಜ (ಬ್ರಾಹ್ಮಣ ವೈಷ್ಣವಮತ) ಮೂಲಸ್ಥಳವು ಮಂಗಲಗಿ ಈಗಿನ ಕಾಳಗಿ ತಾಲೂಕಿನಲ್ಲಿ ಬರುವಂತಹ ಒಂದು ಗ್ರಾಮ. ಇವರು ಮಂಗಲಗಿ ಗ್ರಾಮದವರು ಇವರು ಬ್ರಾಹ್ಮಣ ಕುಲದಲ್ಲಿ ಜನಿಸಿದ ಅತಿಮೇಧಾವಿ ವ್ಯಕ್ತಿ ಎಂದು ಹೇಳಬಹುದು. ಹಾಗೂ ಜನರಲ್ಲಿ ಸಾಮಾನ್ಯ ಮನುಷ್ಯನಂತೆ ಜೀವನ ನಡೆಸುತ್ತಿದ್ದರು. ಇವರಿಗೆ ದೇವರ ಮೇಲೆ ಅಪಾರವಾದ ದುರ್ಗಾದೇವಿಯ ದೇವಾಸ್ಥಾನ ಮಂಗಲಗಿ ಗ್ರಾಮದಲ್ಲಿ ಇಂದಿಗೂ ಇದೆ. ಈ ದೇವಿಯನ್ನು ಅವರು ದಿನನಿತ್ಯ ಪೂಜೆ ಮಾಡುತ್ತಿದ್ದರು ಆಕೆಯ ದರ್ಶನದ ನಂತರವೇ ಮುಂದಿನ ಕೆಲಸಕ್ಕೆ ಕೈಹಾಕುತ್ತಿದ್ದರು ಮಹಾರಾಜರು.

ಆತನ ಭಕ್ತಿಗೆ ಮತ್ತು ಪೂಜೆಗೆ ದೇವಿ ಪ್ರತ್ಯಕ್ಷವಾಗಿ ಭಕ್ತ ನಿನಗೆ ಏನು ಬೇಕು ಕೇಳು ನಾನು ಕೊಡುತ್ತೇನೆ. ಈ ನಿನ್ನ ಅತಿಯಾದ ಭಕ್ತಿ ನನ್ನಿಂದ ಸಹಿಸಿಕೊಳ್ಳಲು ಆಗುತ್ತಿಲ್ಲ ಎಂದಳಂತೆ ಆಗ ಜಯಮಹಾರಾಜರು ದೇವಿಯ ಹತ್ತಿರ ಕೇಳಿದ್ದು ನನಗೆ ಈ ಜನ್ಮಕ್ಕ ಮುಕ್ತಿಕೊಡು ನನ್ನಿಂದ ಯಾವುದೇ ಪಾಪದ ಕೆಲಸವನ್ನು ಮಾಡಿಸಬೇಡ ಯಾವುದೇ ಯಾವುದಾದರು ಒಂದು ಸಾಧನೆಕೊಡು ಎಂದು ಕೇಳಿದಾಗ ಆಗ ದುರ್ಗಾದೇವಿ ನಿನ್ನ ಜೀವನಕ್ಕೆ ಮತ್ತು ನಿನ್ನ ಹುಟ್ಟಿಗೆ ಮುಕ್ತಿಬೇಕೆಂದರೆ ನೀನು ಚಿಂಚೋಳಿ ತಾಲೂಕಿನಲ್ಲಿ ಬರುವ ಹಲಕೂಡ ಗ್ರಾಮಕ್ಕೆ ಹೋಗು ಅಲ್ಲಿಯೇ ವಾಸ ಮಾಡು ನಿನ್ನದೇ ಆದ ಒಂದು ಸ್ಥಳವನ್ನು ಸ್ಥಾಪಿಸಿಕೋ ನಂತರ ಪ್ರತಿ ಏಕದಶಿಯಂದು ಪಂಡರಾಪುರದ ಪಾಂಡುರಂಗನನ್ನು ದರ್ಶನ ಮಾಡಿ ನಿನ್ನ ಮೂಮದಿನ ಕೆಲಸವನ್ನು ನೋಡುತ್ತಾ ಕಾಲವನ್ನೇ ಕಳೆ ಎಂದು ಹೇಳ ಮಾಯಾವಾದಳಂತೆ. ಅಲ್ಲಿಯ ನಿನಗೆ ಮುಕ್ತಿದೆ ಅಂದಿನ ದಿನವೇ ಎಲ್ಲ ರೀತಿಯಿಂದಲೂ ಯೋಚನೆಯನ್ನು ಮಾಡಿ ನನ್ನ ಪಯಣ ನಡೆಸಿದರು ನಿಡಗುಂದ ಪಕ್ಕದಲ್ಲಿರುವ ಹಲಕೂಡ ಗ್ರಾಮಕ್ಕೆ ವಿಳಾಸವನ್ನು ತಿಳಿದುಕೊಂಡು ಬಂದರು ತಮಗೆ ದೇವಿಯು ಹೇಳಿದ ಮಾತುಗಳನ್ನು ಊರ ಜನರಲ್ಲಿ ಮುಚ್ಚಿಡದೆ ಹೇಳಿಕೊಂಡರಂತೆ. ಆಗ ನಿಡಗುಂದದ ದೇಶಪಾಂಡೆಯವರ ಮನತೆನದವರು ಇವರಿಗೆ ಸುತ್ತ 40 ಹಳ್ಳಿಯಲ್ಲಿ ಆಸ್ತಿ ಇದ್ದಿದಂತೆ ಜಯಮಹಾರಜರ ಕಥೆಯನ್ನು ಕೇಳಿ ಹಲಕೂಡ ಗ್ರಾಮದಲ್ಲಿ ನನಗೆ ಆಸ್ತಿ ಇದೆ ಅಲ್ಲಿಯೇ ನೀವು ನೆಲೆಸಿಕೊಳ್ಳಿ ಎಂದು ಹೇಳಿದರು. ಜಯ ಮಹಾರಾಜರು ಸಂತೋಷದಿಂದ ಉಳಿದುಕೊಂಡರು. ನೆಲೆ ಸಿಕ್ಕಿದ ನಂತರ ವಿವಾಹವಾದರು ಹೆಂಡತಿಯ ಹೆಸರು ಅಂಬುಬಾಯಿ ಇವರಿಗೆ ಒಂದು ಮುದ್ದಾರ ಮಗುವಿನ ಜನನವಾಯಿತು ಮಗನ ಹೆಸರು ವಿಠ್ಠಲ ಮಹಾರಾಜ ಜಯಮಹಾರಾಜನು ಪ್ರತಿ ಏಕಾದಶಿಯಂದು ಪಂಡರಪುರಕ್ಕೆ ಹೋಗಿ ಪಾಂಡುರಂಗನ ದರ್ಶನವನ್ನು ಮಾಡಿಕೊಂಡು ಬರುತ್ತಿದ್ದನಂತೆ. ಇಲ್ಲಿ ಆಶ್ಚರ್ಯದ ಸಂಗತಿ ಏನೆಂದರೆ ಅವರು ಕಾಲನಡಗೆಯಿಂದಲೆ ಪಂಡರಪುರಕ್ಕೆ ಹೋಗಿ ದರ್ಶನವನ್ನು ಮುಗಿಸಿ ಅಂದಿನ ದಿನವೇ ಹಿಂತುರುಗಿ ಊರನ್ನು ಸೇರುತ್ತಿದ್ದರಂತೆ ಇದು ಆಶ್ಚರ್ಯದ ಸಂಗತಿಯಾದರೂ ಭಕ್ತಿಯ ಪರಾಕಾಷ್ಠತೆಯನ್ನು ಬಿಂಬಿಸುತ್ತದೆ.

ಹೀಗೆ ಸುಮಾರು 25 ವರ್ಷ ಕಳೆದವು ಇವರು ತಮ್ಮ ಯಾವುದೀಕಾಯಕವನ್ನು ಮಾಡುವಾಗ ಪಾಂಡುರಂಗನನ್ನು ನೆನಪಿಸಿಕೊಂಡು ಮಾಡುತ್ತಿದ್ದರು. ಜಯ ಮಹರಾಜರು ತಮ್ಮ ಕೆಲಸಗಳನ್ನು ದಿನ ನಿತ್ಯ ಮಾಡಿಕೊಂಡು ಜೀವನ ಸಂತೋಷದಿಂದ ನಡೆಸುತ್ತಿದ್ದರು

ತನ್ನ ಹೆಂಡತಿ ಅಂಬುಬಾಯಿ ಕೂಡ ದೈವ ಭಕ್ತಳಾಗಿದ್ದಳು. ಎಲ್ಲಾ ಯಜ್ಞಯಾಗಗಳಲ್ಲಿ ಮನೆ ಕೆಲಸದಲ್ಲಿ ಸಹವರ್ತಿಯಾಗಿ ಕೆಲಸ ಮಾಡುತ್ತಿದ್ದಳು.

ಒಂದು ದಿನ ಜಯಮಹಾರಾಜರು ಮಲಗಿರುವಾಗ ಒಂದು ಸುಂದರ ಸ್ವಪ್ನ ಬಿದ್ದಿತಂತೆ ಅರು ಏನೆಂದರೆ ಸ್ವಪ್ನದಲ್ಲಿ ಪಾಂಡುರಂಗನು ಬಂದು ಜಯ ಮಹಾರಾಜ ಪ್ರತಿ ಏಕದಶಿಯಂದು ನೀನು ನಾನಿರುವ ಸ್ಥಳಕ್ಕೆ ಬರುತ್ತಿದ್ದನನ್ನು ದರ್ಶನ ಮಾಡುತ್ತಿದ್ದಿ ಈಗ ಮುಂಬರುವ ಏಕದಶಿಯಿಂದ ಅಂದರೆ ಆಷಾಡ ಶುದ್ಧ ಏಕದಶಿಯಂದು ನಾನು ನಿನ್ನ ಭಕ್ತಿಗೆ ನೀನಿರುವ ಸ್ಥಳಕ್ಕೆ ಬರುತ್ತೇನೆ. ನಿನ್ನ ಊರಿನಲ್ಲಿಯೇ ನಿನಗೆ ದರ್ಶನ ನೀಡುತ್ತೇನೆ ಎಂದು ಹೇಳಿ ಮಾಯವಾದನಂತೆ ಎದ್ದು ನೋಡಿದಾಗ ಅಕ್ಕ ಪಕ್ಕದಲ್ಲಿ ಯಾರು ಇಲ್ವಂತೆ ಬೆಳಗ್ಗೆ ಎದ್ದು ಮೇಲೆ ಅವರಿಗೆ ಚಿಂತೆಯಾಯಿತಂತೆ ಪಾಂಡುರಂಗ ಹೇಗೆ ಬರುತ್ತಾನೆ ನಾನು ಹೇಗೆ ಗುರುತಿಸಲಿ, ನಿಜವಾಗಿಯೂ ಬರುತ್ತಾನೆಯೇ ಎಂದು ಆಲೋಚನೆಯಲ್ಲಿ ತೊಡಗಿದರಂತೆ. ಇದೇನಿದು ನನಗೆ ಈತರ ಸ್ವಪ್ನ ಬಿದ್ದತ್ತಲ್ಲ ಎಂದು ಯೋಚನೆ ಮಾಡತೊಡಗಿದರು.

ತನ್ನ ಮನಸ್ಸಿನಲ್ಲಿಯೂ ಹಲವಾರು ಪ್ರಶ್ನೆಗಳನ್ನು ಹಾಕಿಕೊಂಡು ರಾತ್ರಿ ಮಲಗಿರುವಾಗ ಪುನಃ ಮತ್ತೆ ಸ್ವಪ್ನದಲ್ಲಿ ಪಾಂಡುರಂಗನ ಒಂದು ಹೇಳಿದನಂತೆ ನಾನು ಬಷೀರಾಬಾದ ಸಮೀಪವಿರುವ ತಾಂಡೂರ ಎಂಬ ಊರು (ಆಂದ್ರ ಪ್ರದೇಶ) ನಲ್ಲಿ ಕೊಯಟಿಗರ ಕಡತಿ (ಧಾನ್ಯಗಳ ಮಳಿಗೆ)ಯಲ್ಲಿ ಕೆಂಪು ಬಣ್ಣವಿರುವ ಒಂದು ಅರೆ ಚೀಲ ಇರುತ್ತದೆ. ಆ ಅಕ್ಕಿ ಚೀಲವನ್ನು ನೀನು ತೆಗೆದುಕೊಂಡು ಬಾ ಅದರದಲ್ಲಿ ನಾನು ನಿನ್ನೊಂದಿಗೆ ಬರುತ್ತೇನೆ ಅಂದು ನಿನ್ನ ಊರಿನಲ್ಲಿ ಅನ್ನ ದಾಸೋಹವನ್ನು ಏರ್ಪಡಿಸು ನೀನು ತಂದಿರುವ ಅಕ್ಕಿಯನ್ನು ದಾಸೋಹಕ್ಕೆ ಬಳಸು ಎಂದು ಹೇಳಿ ಮಾಯಾವಾದನಂತೆ ಶ್ರೀ ಗುರು ಜಯಮಹಾರಾಜರಿಗೆ ಸಂತೋಷವಾಯಿತು ಕೊನೆಗೆ ನನ್ನ ಎಲ್ಲ ಪ್ರಶ್ನೆಗಳಿಗೆ ಉತ್ತರ ದೊರಕಿದಂತಾಯಿತು ಎಂದು ಸಮುದಾನ ಮಾಡಿಕೊಂಡರು. ಬೆಳ್ಳಿಗೆ ಎದ್ದು ತಮ್ಮ ಎಲ್ಲ ಕೆಲಸ ಕಾರ್ಯಗಳನ್ನು ಮುಗಿಸಿಕೊಂಡು ಕೇಳುತಿರುವಾಗ ಹೆಂಡತಿಯಾದ ಅಂಬುಬಾಯಿ ನಾಳೆ ಏಕದಶಿಗೆ ಪಂಡರಪುರಕ್ಕೆ ಹೋಗಲು ಸಿದ್ಧತೆ ಮಾಡಿ ಕೊಡಲೆ ಎಂದು ಕೇಳಿದಾಗ ಆಗ ಮಹಾರಾಜರು ತನಗೆ ಬಿದ್ದ ಸ್ವಪ್ನದ ಕಥೆಯನ್ನು ವಿವರಿಸಿ ಅಂಬುಬಾಯಿಗೆ ಹೇಳಿದರು ಆಕೆ ಸಂತೋಷದಿಂದ ನಿಜವೇ ನಮ್ಮ ಮನೆಗೆ ಪಾಂಡುರಂಗ ಬರುತ್ತಾನೆ ಬರುತ್ತಾನೆಂದು ತಡೆಯಲಾರದಷ್ಟು ಸಂತೋಷಪಟ್ಟಳು.

ಮನೆಯನ್ನೆಲ್ಲ ಶುಭ್ರಗೊಳಿಸಿದಳು ಪಾಂಡುರಂಗನ ಜಪದಲ್ಲಿ ಕಾಯುತ್ತ ಕುಳಿತಳು ಮನೆಯಲ್ಲಿ ಸಹ ಎಲ್ಲ ಸಿದ್ಧತೆಗಳು ಮಾಡಿಕೊಂಡಿದ್ದರು. ಮಾರನೆ ದಿನ ಬೆಳಗ್ಗೆ ಬೇಗನೆ ಎದ್ದು ಸ್ನಾನವನ್ನು ಮುಗಿಸಿಕೊಂಡು ತಾಂಡುರಕ್ಕೆ ಪಾಂಡುರಂಗನನ್ನು ಕರೆತರಲು ಹೋದರು ಕೋಮಟಗೇರ ಅಡತಿಯನ್ನು ಹುಡುಕಿಕೊಂಡು ಹೋಗಿ ಅಡತಿಯ ಮಾಲೀಕನಿಗೆ ನನಗೆ ಆ ಕೆಂಪು ಚೀಲವಿರುವ ಅಕ್ಕಿಯನ್ನು ಕೊಡಿ ಎಂದು ಕೇಳಿದಾಗ ಅದತಿಯ ಮಾಲಿನ ಇಲ್ಲ ಇಲ್ಲ ನಮಗೆ ಆ ಅಕ್ಕಿಯು ಚೀಲ ಬೇಕು ನಾವು ಅದನ್ನು ನಮ್ಮ ಮನೆಗೆಂದು ತರಿಸಿದ್ದೇವೆ ನೀವು ಬೇರೆಯಾವುದಾದರು ಅಕ್ಕಿ ಚೀಲವನ್ನು ತೆಗೆದುಕೊಂಡು ಹೋಗಿ ಎಂದು ಹೇಲಿದರು. ಆಗ ಜಯ ರಾಮ ಮಹಾರಾಜನು ಇಲ್ಲ ಆ ಚೀಲದ ಅಗತ್ಯ ನನಗೆ ತುಂಬಾ ಇದೆ ನನಗೆ ಬೇಕೆ

ಬೇಕು ಎಂದು ಕೇಳಿದರೂ ಸಹ ಮಾಲಿಕ ಅದನ್ನು ಕೊಡಲಿಲ್ಲವಂತೆ ಆಗ ಜಯ ಮಹಾರಾಜರು ತನಗೆ ಬಿದ್ದಿರುವ ಸ್ವಪ್ನದ ಬಗ್ಗೆ ತಿಳಿಸಿದಂತೆ ಅವರ ಸ್ವಪ್ನದ ವಿಷಯ ಕೇಳಿ ಇಲ್ಲಿರುವ ಎಲ್ಲ ಜನರು ಅಪಹಾಸ್ಯ ಮಾಡಿ ನಗೆ ಮಾಡಿದರಂತೆ ಜಯ ಮಹಾರಾಜರು ನಿಮಗೆ ಅನುಮಾನವಿದ್ದರೆ ನೀವೀ ಅದನ್ನು ಬಿಚ್ಚಿ ತೆಗೆದು ನೋಡಿ ಎಂದು ಹೇಳಿದರೂ ನಿನಗೆ ಒಂದು ಸ್ವಪ್ನ ಆ ಸ್ವಪ್ನದಲ್ಲಿ ಪಾಂಡುರಂಗ ಬರುವುದು ಹೇಳಿದನಂತೆ ಮತ್ತೆ ಅಸಹಾಸ್ಯ ಮಾಡಿ ನಗುತ್ತಿದ್ದರಂತೆ ಇದು ನಿಜ ನಾನು ಹೇಳುವುದು ನಿಮಗೆ ಸುಳ್ಳು ಎಂದು ಅನಿಸಿದರೆ ನೀವು ನೋಡಬಹುದು ಅದಕ್ಕೇನು ಅಡ್ಡಿಯಿಲ್ಲ ಎಂದು ಹೇಳಿದರು ಅಡತಿಯ ಮಾಲಿಕ ಆಯಿತು ನೋಡೆ ಬಿಡೋಣ ನಿನ್ನ ಸ್ವಪ್ನ ನಿಜವಾಗುತ್ತಾ ಏನು ಇಲ್ಲ ಎಂದು ಕೆಲಸದ ಆಳಗಳಿಂದ ಅಕ್ಕಿ ಚೀಲವನ್ನು ಕೆಳಗೆ ಇಳಿಸಿ ಅಕ್ಕಿಯನ್ನು ನೆಲಕ್ಕೆ ಹಾಕಿದಾಗ ಅದರಲ್ಲಿ ಪಾಂಡುರಂಗ ಮತ್ತು ರುಕ್ಮೀಣಿ ದೇವಿಯ ಮೂರ್ತಿ ಪಂಡರಪುರದಲ್ಲಿ ಹೇಗೆ ಇವೆಯೋ ಹಾಗೆಯೇ ನೆಲಕ್ಕೆ ಬಿದ್ದವಂತೆ ಆಗ ಎಲ್ಲರೂ ಗಾಬರಿ ಮತ್ತು ಆಶ್ಚರ್ಯದಿಂದ ಕೈ ಮುಗಿದು ಜಯ ಮಹಾರಾಜರಿಗೆ ನೀನು ಸಾಮಾನ್ಯವಾದ ವ್ಯಕ್ತಿ ಅಲ್ಲ ನಿಜಕ್ಕೂ ನೀನು ದೈವ ಸ್ವರೂಪಿಯಾದ ವ್ಯಕ್ತಿ ನಿನ್ನ ಭಕ್ತಿಗೆ ಒಲಿದು ಪಾಂಡುರಂಗನೆ ಇಲ್ಲಿ ಬಂದನೆಂದರೆ ನಿನ್ನ ಬಗ್ಗೆ ಎಷ್ಟು ಹೋಗಳಿದರೂ ಸಾಲದು ಎಂದು ಅಲ್ಲಿನ ಜನರೆಲ್ಲ ಮಾತಾನಾಡಿ ಪುನಃ ಅಕ್ಕಿಯನ್ನು ಚೀಲದಲ್ಲಿ ಹಾಕಿ ಚೀಲವನ್ನು ಕೊಟ್ಟು ಕಳುಹಿಸಿದರಂತೆ ಮಹಾರಾಜನು ಚೀಲವನ್ನು ತೆಗೆದುಕೊಂಡು ರೈಲು ನಿಲ್ದಾಣಕ್ಕೆ ಹೋಗಿ ರೈಲಿನ ಗಾಡಿಯಲ್ಲಿ ಹಾಕಿಕೊಂಡು ಬಸಿರಬಾದಕ್ಕೆ ಬಂದು ಅಲ್ಲಿಂದ ಎತ್ತಿನ ಬಂಡಿಯಲ್ಲಿ ಚೀಲವನ್ನು ತೆಗೆದುಕೊಂಡು ಬಂದರು ಶುದ್ಧ ಆಶಾಡ ಏಕದಶಿಯಂದು ಪಾಂಡುರಂಗ ಸ್ವಪ್ನದಲ್ಲಿ ಹೇಳಿದ ಹಾಗೆಯೇ ಪಂಡರಪುರದಿಂದ ಹಲಕೊಡ ಗ್ರಾಮದ ಜಯ ಮಹಾರಾಜರ ಮನೆಗೆ ಬಂದೇ ಬಿಟ್ಟನು. ಅಂದು ವಿಷಯ ತಿಳಿದ ಊರಿನ ಜನರು ಪಾಂಡುರಂಗನ ದರ್ಶನಕ್ಕಾಗಿ ತಮ್ಮ ಕೆಲಸವನ್ನೆಲ್ಲ ಬಿಟ್ಟು ಸಾಲಾಗಿ ಬಂದ ನಿಂತರು ನೋಡಲು ಚೀಲದಲ್ಲಿರುವ ಪಾಂಡುರಂಗನನ್ನು ತೆಗೆದುಕೊಂಡು ಅಕ್ಕಿಯನ್ನು ಪ್ರಸಾರ ಮಾಡಲು ಕೊಟ್ಟರು ಒಂದು ಕಡೆ ಯಜ್ಞಯಾಗಗಳು ಹೋಮ ನಡೆಸಿದರು. ಪಾಂಡುರಾಗನನ್ನು ಅಭಿಷೇಕದಿಂದ ತೊಳೆದು ಪೂಜೆ ಪುನಸ್ಕರವನ್ನು ಬಹು ವಿಜೃಂಭಣೆಯಿಂದ ನಡೆಯುತ್ತಿತ್ತು ಇನ್ನೊಂದು ಕಡೆ ತೆಗೆದುಕೊಂಡು ಬಂದ ಅಕ್ಕಿಯಿಂದ ಪ್ರಸಾದ ತಯಾರಾಗುತ್ತಿತ್ತು. ಊರ ಜನರೆಲ್ಲರು ಪಾಂಡುರಂಗನ ಇಂತರ ಭಕ್ತ ಮತ್ತೆ ಎಲ್ಲಿ ಸಿಗಲಾರನು ಎಂದು ಮಾತಾನಾಡಿಕೊಳ್ಳುತ್ತಿದ್ದರು ಇನ್ನು ಕೆಲವು ಜನರು ನಿನ್ನ ಭಕ್ತಿಗೆ ಮಚ್ಚಿ ಪಾಂಡುರಂಗ ಬಂದಿದ್ದಾನೆ ಎಂದು ಹೋಗಳಿ ಕೊಂಡಾಡಿದರು.

ಪಾಂಡುರಂಗ ಮತ್ತು ರುಕ್ಮೀಣಿಯರನ್ನು ಕೂಡಿಸಲು ಅವತ್ತಿನ ದಿನದಂತೆ ಗದ್ದುಗೆ (ಜಗಲಿ)ಯನ್ನು ಏರ್ಪಡಿಸಿಕೊಂಡರು ಈ ವಿಷಯವನ್ನು ತಿಳಿದು ಸುತ್ತ ಮುತ್ತ ಇರುವ ಹಳ್ಳಿ ಜನರು ನೋಡಲು ಸಾಲುಗಟ್ಟಿ ಬರುತ್ತಿದ್ದರಂಎ ಹಾಗೂ ಅನ್ನ ದಾಸೋಹ ಆ ತಂದ ಅಕ್ಕಿಯಲ್ಲಿಯೂ ನಡೆಯುತ್ತಲ್ಲಿಯೇ ಇತ್ತಂತೆ ಒಬ್ಬರಿಗೂ ಸಹ ಅನ್ನವನ್ನು ಕಡಿಮೆ ಬೀಳಲಿಲ್ಲವಂತೆ ಅಡುಗೆ ಮಾಡುವ ಭಟ್ಟ ಆಶ್ಚರ್ಯದಿಂದ ಇಷ್ಟು ಅಕ್ಕಿಯಲ್ಲಿ ಪಾಂಡುರಂಗನ ಜನರು ಊಟ ಮಾಡಿದ್ದಾರೆಯೇ ಎಂದು ಆಶ್ಚರ್ಯಪಟ್ಟು ಪಾಂಡುರಂಗನ ಮಹಿಮೆ

ಮಹಾರಾಜನ ಭಕ್ತಿ ಮೆಚ್ಚಬೇಕಾದದ್ದು ಎಂದು ಹೇಳಿದನು. ಇದೆಂಥ ಮಾಯೇ ಎಂದು ಬಂದಿರುವ ಜನರೆಲ್ಲ ಮಾತಾನಾಡಕೊಳ್ಳುತ್ತಿದ್ದರು.

ಅಂದಿನದಿನವು ಜಾತ್ರೆ ಮುಗಿಯಿತು. ಬಂದಿರುವ ಜನರು ಪಾಂಡುರಂಗನ ಪಲ್ಲಕ್ಕಿಯನ್ನು ಊರಲ್ಲಿ ಮೆರವಣಿಗೆ ಮಾಡಿ ತಮ್ಮ ತಮ್ಮ ಊರಿಗೆ ಹೋದರು. ಪ್ರತಿದಿನ ಪಾಂಡುರಂಗನಿಗೆ ಮೀಸಲಿನಿಂದ ಪೂಜೆ ನೈವಿದ್ಯ ಸಾಯಂಕಾಲದ ವೇಳೆಗೆ ಆರತಿ ಗುಡಿಯಲ್ಲಿ ದೀಪ ಹಚ್ಚುವುದು ಆರತಿ ಮಾಡುವಾಗ ಗಂಟೆ ಬಾರಿಸುವುದು ಮತ್ತು ತಾಳಗಳಿಂದ ಸದ್ದು ಮಾಡುವುದು ಜಾಗಟೇ ಬಡೆಯುವುದು ಇಂದಿಗೂ ಸಹ ಮುಂದು ವರೆಸಿಕೊಂಡು ಬರುತ್ತಿದ್ದಾರೆ. ಇಲ್ಲಿ ಎರಡು ಉತ್ಸವಗಳು ನಡೆಯುತ್ತವೆ. ಒಂದು ಉತ್ಸವ ಆಷಾಡ ಏಕದಶಿಯಂದು. ಪಾಡುಂಗರ ಊರಿಗೆ ಬಂದಿರುವ ನಿಮಿತ್ಯ ಇನ್ನೊಂದು ಪಂಡರಪುರದಲ್ಲಿ ಪಾಂಡುರಂಗನ ಜಾತ್ರೆ ಮಾಡುವಾಗ ಇಲ್ಲಿಯೂ ಸಹ ಜಾತ್ರೆ ಮಾಡುತ್ತಾರೆ.

ಜಾತ್ರೆಯ ದಿನದಂದು ಪಲ್ಲಕ್ಕಿಯನ್ನು ಹೂವಿನಿಂದ ಅಲಂಕಾರಿಸಿ ಪಾಂಡುರಂಗನ ಸ್ಥಳದಿಂದ ಅಲ್ಲೆ ಮುಂದಿರುವ ಹನುಮಂತನ ದೇವಾಸ್ಥಾನದವರೆಗೆ ತೆಗೆದುಕೊಂಡು ಹೋಗುತ್ತಾರೆ. ಅಲ್ಲಿ ಊರ ಜನರೆಲ್ಲ ಸೇರಿ ಒಂದು ಸಾಂಸ್ಕೃತಿಕ ಕಾರ್ಯಕ್ರಮವನ್ನೇ ಮಾಡುತ್ತಾರೆ ಅದೇನೆಂದರೆ ಹಗ್ಗಕ್ಕೆ ಒಂದು ಮಡಿಕೆಯ ಕಟ್ಟಿ ಅದರಲ್ಲಿ ಜೋಳದ ಅರಳು ಮತ್ತು ಮಾಸರನ್ನು ಹಾಕುತ್ತಾರೆ. ಅದು ಮೋಲಕ್ಕೆ ಕೆಳಕ್ಕೆ ಮಾಡುತ್ತಾರೆ ಕೆಳಗೆ ಇರುವ ಜನರು ಅದನ್ನು ತೆಗೆದುಕೊಳ್ಳಲು ಪ್ರಯತ್ನಿಸುತ್ತಾರೆ ಅದು ಮೊದಲು ಯಾರಿಗೆ ಸಿಗುತ್ತದೆಯೋ ಅವರಿಗೆ ಶುಭಫಲವಾಗುತ್ತದೆ ಎಂಬ ನಂಬಿಕೆ ಆ ಊರಲ್ಲಿ ದೃಢವಾಗಿ ಬೆಳೆದುಕೊಂಡು ಬಂದಿದೆ ಊರ ಜನರು ಪಾಂಡುರಂಗನಿಗೆ ಹರಕೆಯನ್ನು ಮಾಡುತ್ತಾರೆ ಅದು ಅವರಿಗೆ ಇಡೇರಿದಾಗ ಹರಕೆಯನ್ನು ಜಾತ್ರೆಯ ದಿನದಂದು ನೆರೆವೇರಿಸುತ್ತಾರೆ.

ಜಯರಾಮರ ಮಹಾರಾಜರ ಬಗ್ಗೆ ವಿಚಾರಿಸಿದಾಗ ನಮಗೆ ಇಲ್ಲಿ ಇನ್ನೂ ಹೆಚ್ಚಿನ ಮಾಹಿತಿ ಸಿಕ್ಕಿತು ಮತ್ತು ಅವರ ಪವಾಡಗಳು ಮತ್ತು ಅವರ ಸೇವೆಗಳು ತಿಳಿದುಬಂದವು.

ಜಯರಾಮಹಾರಾಜರು ಸಂಸ್ಕೃತ ಪಂಡಿತರು ಆಗಿದ್ದರು ಸಂಸ್ಕೃತದಲ್ಲಿ ಗ್ರಂಥಗಳನ್ನು ರಚಿಸಿದ್ದಾರೆ. ಹಾಗೆಯೂ ಇವರಿಗೆ ಶ್ರೀಮನ್ನ ನಾರಾಯಣ ಸ್ವರೂಪದವನು ಎಂದು ಸಹ ಕರೆಯುತ್ತಿದ್ದರಂತೆ ಕಾರಣ ಕೇಳಿದಾಗ ಕಾರ್ಯಪುರ ಎಂಬ ಗ್ರಾಮ (ಮಹರಾಷ್ಟ್ರ)ದಲ್ಲಿ ಒಂದು ದಿನ ಎಲ್ಲ ಮನೆಗಳಿಗೆ ಬೆಂಕಿ ಬಿದ್ದಿತಂತೆ ಕಲ್ಲಿನ ಜನರೆಲ್ಲರೂ ಕಂಗಲಾಗಿ ದಿಕ್ಕು ತೋಚದೆ ತಮ್ಮ ಮಕ್ಕಳ, ತಂದೆ ತಾಯಿಯರ ಜೀವ ಕಾಪಾಡಿಕೊಳ್ಳಲು ಪರದಾಡುತ್ತಿದ್ದಾಗ ಇಲ್ಲಿ ಜಯಮಹಾರಾಜನು ಪಾಂಡುರಂಗನ ಮುಂದಿರುವ ಅಂಗಳದಲ್ಲಿ ನೀರು ಚಿಂಪಡಿಸದಿರಂತೆ ಆಗ ಕಾರ್ಯಪುರದಲ್ಲಿ ಹತ್ತಿರುವ ಬೆಂಕಿ ದಿಢೀರನೆ ಆರಿಹೋಯಿತಂತೆ ಅವರು ನೀರು ಸಿಂಪಡಿಸುತ್ತಿರುವುದು ನೋಡಿ ಆತನ ಭಕ್ತ ಸಿಂಪಗೇರ (ನಾಮಧೇಯ ಸಿಕ್ಕಿಲ್ಲ) ದವನು ಮತ್ತು ಅಲ್ಲಿ ಕೆಲಸ ಮಾಡುತ್ತಿರುವ ಜನರು ಕೇಳಿದಾಗ ಕಾರ್ಯಪುರದಲ್ಲಿ ನಡೆದ ಘಟನೆಯನ್ನು ಹೇಳಿದರಂತೆ. ಇದು ನಿಜನಾ ಸುಳ್ಳ ಎಂದು ಗ್ರಾಮದ ಜನರು ಕಾರ್ಯಪುರಕ್ಕೆ ಹೋಗಿ ನೋಡಿ ಬಂದರಂತೆ.

ಕಾರ್ಯಪುರದಲ್ಲಿ ಬೆಂಕಿ ಆರಿ ಹೋಗಿರುವುದನ್ನು ಕಂಡು ಜನರು ಯೋಚನೆ ಮಾಡುವಂತಾಯಿತಂತೆ. ಇಲ್ಲಿನ ಜನರು ಅಲ್ಲಿಗೆ ಹೋಗಿ ಕೇಳಿದಾಗ ಮತ್ತೆ ಜಯ ಮಹಾರಾಜರ ಬಗ್ಗೆ ಹೇಳಿದಾಗ ಸುಳ್ಳೆಂದು ನಂಬಿದರಂತೆ ಒಂದು ಇನ ಕಾರ್ಯಪುರದಲ್ಲಿ ಅದೇ ಗ್ರಾಮದ ವ್ಯಕ್ತಿ ನಿವೃತ್ತಿ ಆತನ ಹೆಸರು ಅವನ ಸ್ವಪ್ನದಲ್ಲಿ ಹೋಗಿ ನಾನು ಪಾಂಡುರಂಗನ ಭಕ್ತ ನನಗೆ ಇಲ್ಲಿ ಆಗುವ ಅನಾಹುತ ಗೊತ್ತಾಗಿತ್ತು ಅದಕ್ಕೆ ನಾನು ಪಾಂಡುರಂಗನನ್ನು ನೆನೆದು ನೀರನ್ನು ಸಿಂಪಡಿಸಿರೆ ಎಂದು ಹೇಳಿ ಮಯವಾದನಂತೆ ನಿವೃತ್ತಿ ಗಾಬರಿಯಿಂದ ಯಾರು ನೀನು ಎಂದು ಎದ್ದು ನೋಡಿದಾಗ ಪಕ್ಕದಲ್ಲಿ ಯಾರು ಇಲ್ಲವಂತೆ, ಆಗ ನಿವೃತ್ತಿಗೆ ಹಲಕೊಡ ಗ್ರಾಮದಿಂದ ಕಾರ್ಯಪುರಕ್ಕೆ ಬಂದು ಹೋಗಿದ ಜನರ ಬಗ್ಗೆ ನೆನಪಾಯಿತಂತೆ ಇದು ನಿಜವೇ ಇರಬಹುದು ಎಂದು ಹಲಕೊಡ ಊರಿನ ಬಗ್ಗೆ ವಿಚಾರಿಸಿ ಜಯ ಮಹಾರಾಜನನ್ನು ಭೇಟಿ ಮಾಡಲು ಬಂದರು ಆಗ ಅಲ್ಲಿ ಪಾಂಡುರಂಗನ ದರ್ಶನ ಮಾಡಿ ಊರಿಗೆ ಹೋಗಿ ಎಲ್ಲಸುದ್ಧಿಯನ್ನು ಹೇಳಿದನು ಊರ ಜನರು ಎಲ್ಲರೂ ಹಲಕೊಡ ಗ್ರಾಮಕ್ಕೆ ಬಂದು ಪಾಂಡುರಂಗನ ದರ್ಶನ ಮಾಡಿ ಹೋದರಂತೆ ಪ್ರತಿ ವರ್ಷ ಜಾತ್ರೆಗೆ ಕಾರ್ಯಪುರ, ಪುರವೇಣಿ, ನಾಂದೇಡ, ಲಾತೂರ, ಧರಣಿ, ಕಾಮಖೇಡದಿಂದ ಜನರು ಜಾತ್ರೆಗೆ ಬಂದು ಹೋಗುತ್ತಾರೆ.

ಇನ್ನೊಂದು ವಿಷಯ ಏನೆಂದರೆ ಜಯರಾಮ ಮಹಾರಾಜರಿಗೆ ಒಬ್ಬ ಮಗನು ಆತನ ಹೆಸರು ವಿಠ್ಠಲರಾವ ಮಹಾರಾಜ ಮುಂದೆ ಮಕ್ಕಳಾಗಲಿಲ್ಲ ಒಂದು ದಿವಸ ಧ್ಯಾನಕ್ಕೆ ಕುಳಿತಾಗ ಮಹರಾಜ ವಂಶಕ್ಕೆ ಒಂದೇ ಗಂಡು ಮಗ ಮಾತ್ರ ಇರುವುದು ಹಾಗೆಯೇ ಮರಿ ಮೊಮ್ಮಗನ ತಲೆಗೆ ನನ್ನವಂಶ ನಿಂತು ಹೋಗುತ್ತದೆ ಎಂದು ಸಹ ತಿಳಿದುಕೊಂಡನಂತೆ ಇದು ಅವರು ಸಂಸ್ಕೃತ ಗ್ರಂಥದಲ್ಲಿ ಬರೆದಿಟ್ಟಿದ್ದಾರೆ ಇಂದು ಅದು ನಿಜವಾಗಿದೆ.

ಜಯರಾಮ ಮಹಾರಾಜನಿಗೆ ಮೂಲಭಕ್ತನೊಬ್ಬನು ಇದ್ದಾನೆ ಇತನ ಹೆಸರು ತಿಳಿದು ಬಂದಿಲ್ಲ ಈತನು ಯಾವಾಗಲೂ ಜಯರಾಮ ಮಾಹಾರಾಜನ ಹತ್ತಿರನೇ ಇರುತ್ತಿದ್ದ ಊರು ಬಸಿರಬಾದ ಪಾಂಡುರಂಗನ ಸೇವೆಯಲ್ಲಿ ತೊಡಗಿದ್ದ ಯಾವುದೇ ಕೆಲಸ ಹೇಳಿದರೂ ಬೇಜಾರಿಲ್ಲದೆ ಸಂತೋಷದಿಂದ ಪಾಂಡುರಂಗನನ್ನು ನೆನೆಹುತ್ತ ಜಯ ಮಹಾರಾಜನಿಗೆ ಆಪ್ತ ಗೆಳೆಯನಾಗಿ ಬದುಕುತ್ತಿದ್ದ.

ಜಯ ಮಹಾರಾಜರ ಇನ್ನೊಂದು ಪವಾಡ ಏನೆಂದರೆ ಇವರು ಮಲಗಿರುವಾಗ ಒಂದು ಸ್ವಪ್ನ ಬಿದ್ದಿತಂತೆ ಅದೇನೆಂದರೆ ಹಲಕೊಡ ಗ್ರಾಮ ಮತ್ತು ಬಸಿರಬಾದ ಮಧ್ಯ ಒಂದು ನದಿಯ ಸೇತುವೆ ಇದೆ ಆನದಿಯ ಹೆಸರು ಕಾಗಿಣನದಿ ಇವೆರಡರ ಮಧ್ಯ ಹಾಯ್ದು ಒಂದರಿಂದ ಇನ್ನೊಂದೂರಿಗೆ ಹೋಗಿ ಬಂದು ಮಾಡುತ್ತಾರೆ. ಆ ಹಳ್ಳಿದಲ್ಲಿ ಒಂದು ದೊಡ್ಡ ಕಲ್ಲಿನ ಬಂಡೆ ಆ ಬಂಡೆಯ ಮೇಲೆ ಊರಿನ ಅಗಸ (ಬಟ್ಟೆ ತೊಳಿಯುವವನು) ಪ್ರತಿ ದಿನ ಬಟ್ಟೆಯನ್ನು ತೆಗೆದುಕೊಂಡು ತೊಳೆಯಲು ಹೋಗುತ್ತಿದ್ದ ಆ ಕಲ್ಲಿನ ಮೇಲೆಯೇ ಬಟ್ಟೆಗಳನ್ನು ಬಡಿದು ಲೆಕ್ಕಿ ತೊಳೆದು ತರುತ್ತಿದ್ದ ಮಹಾರಾಜರ ಕನಸಿನಲ್ಲಿ ಆ ಕಲ್ಲಿನ ಕೆಳಭಾಗ ಆಂಜನೆಯನ ರೂಪವು ಇದೆ ಎಂದು ನಾನು ನಿಮ್ಮ ಊರಿಗೆ ಬರುತ್ತೇನೆ ನಿಮ್ಮ ಊರಿನ ಅಗಸ ನನ್ನ ಬೆನ್ನ ಮೇಲೆ ಬಟ್ಟೆ ತೋಳೆದು ನನ್ನ ಬೆನ್ನು ನೋವು ಆಗುತ್ತದೆ ಎಂದು

ಹೇಳಿದನು ಮತ್ತು ಊರಿನ ಕೆಲವರು ಜನರನ್ನು ಮಾರನೆ ದಿವಸ ಮಹಾರಾಜರು ಊರಿನ ಅಗಸನನ್ನು ಕರೆದುಕೊಂಡು ಹಳ್ಳಕ್ಕೆ ಹೋಗಿ ಆ ಕಲ್ಲನ್ನು ತಿರುಗಿಸಿ ನೋಡಿದಾಗ ಆಚಿಜನೇಯನ ರೂಪವಿತ್ತು ಆಗ ಮಹಾರಾಜರು ಅದನ್ನು ನೋಡಿ ಅಗಸ ಆಂಜನೆಯನ ಕಾಲಿಗೆ ಬಿದ್ದು ತಂದೆ ನನ್ನನೇ ಕ್ಷಮಿಸು ತಂದೆ ಗೊತ್ತಿಲ್ಲದೆ ನನ್ನಿಂದ ತಪ್ಪಾಗಿದೆ ಎಂದು ಬೇಡಿಕೊಂಡನು. ಆಂಜನೇಯನ ಮೂರ್ತಿಯನ್ನು ಕಂಡು ಎಲ್ಲರು ನಿಬ್ಬೆರಗಾದರಂತೆ ಜೈ ಆಂಜನೇಯ ಎಂದು ಎತ್ತಲೂ ಹೋದಾಗ ಬರಲಿಲ್ಲವಂತೇ ಆಗ ಊರಲ್ಲಿರುವ ಜನರು ಮಾರನೆ ದಿವಸ ಬೆಳ್ಳಿಗೆ ಎದ್ದು ಎತ್ತಿನ ಬಂಡೆಯನ್ನು ಕಟ್ಟಿಕೊಂಡು ಆಂಜನೆಯನನ್ನು ತರಲು ಹೋದಾಗ ಬರಲಿಲ್ಲವಂತೆ ಅಷ್ಟೇ ನಿಂತು ಬಿಟ್ಟನಂತೆ ಆಗ ಊರಲ್ಲಿನ ಜನರು ಓಡಿ ಬಂದು ಜಯ ಮಾಹಾರಾಜನಿಗೆ ವಿಷಯ ತಿಳಿಸಿದಾಗ ಮಹಾರಾಜನು ನಡಿರಿ ನಾನೇ ಬಂದು ನೋಡುತ್ತೇನೆ ಎಂದು ಆಂಜನೆಯನು ಇರುವ ಸ್ಥಳಕ್ಕೆ ಬಂದು ಯಾಕಪ್ಪ ತಂದೆ ನಮ್ಮ ಊರಿಗೆ ಬರುತ್ತೇನೆ ಎಂದು ಹೇಳಿ ಈಗ ಬಂಡಿಯನ್ನು ಹತ್ತುತ್ತಿಲ್ಲ ನಡೆ ಇಗಲೇ ನಡಿ ಹೋಗೋಣ ಎಂದು ಆಂಜನೇಯನ ಎದೆಯ ಮೇಲೆ ಐದು ಬೆರಳಿನ ಹಸ್ತ ಹಾಕಿದ ತಕ್ಷಣ ಮೂರ್ತಿ ಬಂದು ಬಂಡೆಯ ಕುಳಿತು ಕೊಂಡತಿತ್ತಂತೆ ಆ ಕೈ ಬೆರಳಿನ ಗುರುತು ಇಂದಿಗೂ ಸಹ ಆಂಜನೆಯ ಮೂರ್ತಿಯ ಮೇಲೆ ಕಾಣಬಹುದು.

ಊರ ಜನರೆಲ್ಲರು ಜೈ ಆಂಜನೆಯ ಎನ್ನತ್ತ ಮೂರ್ತಿಯನ್ನು ತೆಗೆದುಕೊಂಡು ಊರ ಕಡೆಗೆ ಬಂದರು ಊರಿನಲ್ಲಿ ಎಲ್ಲಿ ಕೂರಿಸಿಕೊಳ್ಳಬೇಕು ಎಂದು ಯೋಚನೆಯನ್ನು ಮಾಡುವಾಗ ಚಂದ್ರಲಾಂಬಾ ಎನ್ನುವ ಒಂದು ಬಾವಿ ಇದೆ ಆ ಬಾವಿಯ ಪಕ್ಕದಲ್ಲಿ ಬಂಡೆಯು ತಾನಾಗಿಯೇ ನಿಂತು ಬಿಟ್ಟಿತು. ಆಗ ಎಲ್ಲರೂ ಆಂಜನೆಯ ಇಲ್ಲೇಕೂಡಲು ಆಜ್ಞೆ ಮಾಡಿರಬಹುದು ಎಂದು ಮಾತಾನಾಡಿಕೊಂಡರು ಇನ್ನೊಂದು ಅದ್ಭುತವಂತೆ ಬಂಡೆಯ ಮಧ್ಯ ಭಾಗ ಈ ಕಡೆಯ ಕೆಳಗೆ ತಾರದಂತೆ ಮೇಲೆ ಹೋಗದಂತೆ ಮಧ್ಯವಾಗಿ ನಿಂತುಕೊಂಡು ತೊಗಾಡುತ್ತ ಇದ್ದನಂತೆ ಈತನಿಗೆ ಗುಡಿಯನ್ನು ನಿರ್ಮಿಸಬೇಕಲ್ಲ ಎಂದು ಏಳು ದಿನದಲ್ಲಿಯೇ ಆಂಜನೆಯನ ಗುಡಿ ನಿರ್ಮಾಣ ಮಾಡಿದರು ಏಳು ದಿವಸ ಆಂಜನೆಯ ತೂಗಾಡುತ್ತಲೆ ಇದ್ದನಂತೆ ದೇವಾಸ್ಥಾನ ನಿರ್ಮಾಣವಾದ ಕೂಡಲೆ ಆಂಜನೆಯ ತಾನಾಗಿಯೇ ಗರ್ಭಗುಡಿಯೊಳಗೆ ಹೋಗಿ ನಿಂತು ಬಿಟ್ಟನಂತೆ ಇಂದಿಗೂ ಸಹ ಆಂಜನೆಯ ನೆಲದ ಮೇಲೆ ಕುಳಿತ್ತಿಲ್ಲ ಮಧ್ಯನೆ ತೂಗಾಡುವ ರೀತಿಯಲ್ಲಿ ಇದ್ದಾನೆ. ಈಗಿನ ಗುಡಿಯ ಪೂಜೆ ಮಾಡುವವರು ಕೆಳಗೆ ಸಿಮೆಂಟಿನಿಂದ ಸಮಭಾಗ ಮಾಡಿ ಬಿಟ್ಟಿದ್ದಾರೆ. ಆಂಜನೆಯನ ಪಕ್ಕದಲ್ಲಿ ಭೈರವನ ಗುಡಿಯು ಸಹ ಇದೆ.

ಮುಂದೆ ಜಯರಾಮ ಮಹಾರಾಜರು ನಿಧನರಾದರು ಇವರು ಪುಷ್ಯ ಶುದ್ಧ ಚವತಿಯಂದು ಕೊನೆಯುಸಿರೆಳದರು. ಇವರ ಸಾವಿನ ಸುದ್ದಿಯನ್ನು ಕೇಳಿದ ಮೂಲಭಕ್ತ ಇವರ ಬೆಳಗಿನ ಸೇವೆಯನ್ನು ಮುಗಿಸಿಯೇ ತನ್ನ ಊರಾದ ಬಸಿರಾಬಾದಗೆ ಹೋಗಿದ್ದ ಅಲ್ಲಿಯೇ ಜಯ ಮಹಾರಾಜರ ಮರಣದ ವಿಷಯ ತಿಳಿದಕೊಂಡು ಓಡೋಡಿ ಬಂದಾಗ ಇಲ್ಲಿ ಜಯರಾಮ ಮಹಾರಾಜರ ಚಿಂತೆಯು ಉರಿಯುತ್ತಿತ್ತು. ಅದನ್ನು ಕಂಡ ಭಕ್ತನು ಅಯ್ಯ ದೇವರೆ ತಂದೆ ನನ್ನ ಆಪ್ತ ದೈವನಾದ ದೇವರನ್ನು ಕರೆದುಕೊಂಡು ಹೋದೆಯ ತಂದೆ

ಎಂದು ಅಳುತ್ತ ಸಮೀಪ ಬಂದು ನನಗೆ ನಿನ್ನ ಕೊನೆಯ ಕ್ಷಣದಲ್ಲಿ ನಿನ್ನ ಬಳಿ ಇರಲಿಲ್ಲವಲ್ಲ ನಿಮ್ಮ ಮುಖವು ಸಹ ನೋಡಲಿಕ್ಕೆ ಆಗಲಿಲ್ಲವಲ್ಲ ಇನ್ನೇಕೆ ನಾನು ಭೂಮಿಯ ಮೇಲೆ ಇರಬೇಕು ನೀನಿಲ್ಲದೇ ನಾನು ಯಾರ ಸೇವೆ ಮಾಡಿಕೊಂಡು ಬದುಕಲಿ ನಾನು ಸಹ ನಿನ್ನೊಂದಿಗೆ ಬರುತ್ತೇನೆ ಎಂದು ಬೆಂಕಿಯಲ್ಲಿ ಆಹುತಿಯಾಗಲು ಹೋದಾಗ ಜಯರಾಮ ಮಹಾರಾಜನು ಐದು ತಲೆಯ ಶೇಷವತಾರವಾಗಿ ಭಕ್ತ ನಿನ್ನ ಭಕ್ತಿಗೆ ನಾನು ಮೆಚ್ಚಿದೆ ಎಂದು ಆಶೀರ್ವಾದ ನೀಡಿ ಮಾಯಾವಾದನಂತೆ. ಮುಂದೆ ಕೆಲವು ದಿವಸಗಳ ನಂತರ ಜಯರಾಮನ ಭಕ್ತನು ಸಹ ಕೊನೆಯುಸಿರೆಳದಂತೆ ಜಯರಾಮ ಮಹಾರಾಜನು ನಿಷ್ಠವಾದ ಭಕ್ತನಿಗೆ ಶೇಷವತಾರವಾಗಿ ಕಾಣಿಸಿಕೊಳ್ಳುತ್ತಾನಂತೆ ಇಂದಿಗೂ ಸಹ ಆತನ ಸಮಾಧಿಯು ಆಂಜನೆಯನ ಗುಡಿಯಿರುವ ಮುಂದಿನ ಭಾಗದಲ್ಲಿ ಇದೆ.

**ಮಗನ ಚರಿತ್ರೆ– ವಿಠ್ಠಲರಾವ ಮಹಾರಾಜ :**

ಈತನು ಒಬ್ಬ ಮೇಧಾವಿ ಇವನಿಗೆ ಸಂಸ್ಕೃತ ಎಂದರೆ ನೀರು ಕುಡಿದಷ್ಟು ಸರಳವಾಗಿತ್ತು ಯಾವಾಗದರೂ ಏನಾದರೂ ಬುದ್ಧಿವಂತಿಕೆ ಮಾತಾನಾಡುತ್ತಿದ್ದರೆ ಅವರಿಗೆ ಸಂಸ್ಕೃತದಲ್ಲಿ ಅರ್ಥವನ್ನು ಹೇಳುತ್ತಿದ್ದನಂತೆ ಈತನು 1100 ವರ್ಷಗಳ ಇತಿಹಾಸ ಆಗು ಹೋಗುಗಳ ಬಗ್ಗೆ ಹೇಳುತ್ತಿದ್ದನಂತೆ ಭವಿಷ್ಯ ನುಡಿಯುತ್ತಿದ್ದನಂತೆ ಅವರು ಯಾವುದೇ ಕೆಲಸ ಕೇಳಿದರೆ ಆಗುತ್ತದೆ ಎಂದರೆ ಆಗುತ್ತದೆ ಇಲ್ಲ ಎಂದರೆ ಇಲ್ಲ ಎಂದು ಸ್ಪಷ್ಟವಾಗಿ ಹೇಳುತ್ತಿದ್ದನಂತೆ ಅದು ಹಾಗೆಯೇ ಆಗುತ್ತಿತ್ತು. ಇವರು ಸಂಸ್ಕೃತದಲ್ಲಿ ಹಲವಾರು ಗ್ರಂಥಗಳು ರಚಿಸಿ ಇಟ್ಟಿದ್ದಾರೆ ಜನರಲ್ಲಿ ಅಪಾರ ಪ್ರೀತಿ ಮತ್ತು ಸಹಾಯ ಕೇಳಿ ಬಂದರೆ ಮಾಡುತ್ತಿದ್ದರು.

ಈತನ ಹೆಂಡತಿ ರಾಧಾಬಾಯಿ ಇವರಿಗೂ ಸಹ ಒಬ್ಬನೆ ಮಗನು ಮಗನ ನಾಮಧ್ಯೇಯ ಗ್ಯಾನರಾವ ಮಹಾರಾಜ, ರಾಧಾಬಾಯಿ ರಾಮನ ಹೆಂಡತಿ ಸೀತೆಯಂತೆ ಹೋಲುತ್ತಿದ್ದಳು ಮುಂದೆ ಇವರಗೆ ಹೆಚ್ಚಿನ ಮಕ್ಕಳ ಚಿಂತೆ ಇದ್ದರು ಒಬ್ಬನೆ ಮಗನು ನಮ್ಮ ವಂಶಕ್ಕೆ ಎಂದು ಸಮಾಧಾನ ಮಾಡಿಕೊಳ್ಳುತ್ತಿದ್ದರು. ಈಕೆಯು ಸತ್ಯವಂತೆ ಆಗಿದ್ದಳಂತೆ ಸತ್ಯದ ಹಾದಿಯಲ್ಲಿಯೇ ನಡೆಯುತ್ತಿದ್ದಳು. ಅಷ್ಟು ಒಳ್ಳೆಯ ಗುಣವನ್ನು ಹೊಂದಿದವಳು ಗ್ಯಾನರಾವ ಮಹಾರಾಜನಿಗೆ ಮುದ್ದಿನ ತಾಯಿಯಾಗಿದ್ದಳು. ವಿಠ್ಠಲ ಮಹಾರಾಜನ ಚರ್ಚೆಯನ್ನು ಕೇಳಿ ಹುಮನಾಬಾದ ಮಾಣಿಕಪ್ರಭು ಸ್ವಾಮಿಗಳು ಇವರನ್ನು ಭೇಟಿಯಾಗಲು (ಫಕೀರ) ಮಾರು ವೇಷದಲ್ಲಿ ಬಂದರಂತೆ ಆಗ ವಿಠ್ಠಲರಾವ ಮಹಾರಾಜ ಫಕೀರ ವೇಷದಲ್ಲಿದ್ದ ಮಾಣಿಕಪ್ರಭು ಸ್ವಾಮಿಯನ್ನು ನೋಡಿ ಈ ವೇಷಕ್ಕೆ ನೀನು ಒಪ್ಪಿಲ್ಲ ನಿನಗೆ ಒಂದು ಆಯುಷ್ಯ ಆರೋಗ್ಯ ಒಳ್ಳೆಯ ನಾಮಧ್ಯೇಯಗಳು ಬರುವಂತಿವೆ ನಿನ್ನ ದಾರಿಯನ್ನು ಸರಿಯಾಗಿ ಮಾಡಿಕೊಂಡು ಹೋಗು ಎಂದು ಹೇಳಿದಾಗ ಆಯಿತು ಮಹಾರಾಜ ಎಂದು ಹೇಳಿ ಅಕ್ಷಯ ಪಾತ್ರೆಯನ್ನು ನೀಡಿದನಂತೆ. ಇಂದು ಆ ಅಕ್ಷಯ ಪಾತ್ರೆಯಲ್ಲಿ ಅಕ್ಕಿಯನ್ನು ಹಾಕಿ ಅನ್ನ ದಾಸೋಹದ ಪ್ರಸಾದವನ್ನು ತಯಾರಿಸುತ್ತಾರೆ. ಇದರಿಂದ ಜಾತ್ರೆಯಲ್ಲಿ ಅನ್ನವೂ ಯಾರಿಗೂ ಕಡಿಮೆ ಬೀಳುವುದಿಲ್ಲ ಎಂದು ಹೇಳಿ ಹೊರಟು ಹೋದನು.

**ಮೊಮ್ಮಗ: ಜ್ಞಾನರಾವ ಮಹಾರಾಜ :**

ಈತನ ಹೆಂಡತಿ ಸಕ್ಕುಬಾಯಿ ಇವರು ತ್ರಿಕಾಲ ಜ್ಞಾನಿಯಾಗಿದ್ದರು ಇವರು ಹುಟ್ಟಿ ಎಂಟು ವರ್ಷದಲ್ಲಿಯೇ ಸಂಸ್ಕೃತದಲ್ಲಿ ಭವಿಷ್ಯದ ಬಗ್ಗೆ ಪುಸ್ತಕ ಬರೆದಿದ್ದನಂತೆ ಆ ಪುಸ್ತಕದಲ್ಲಿ ಇರುವ ಹಾಗೆಯೇ ಭವಿಷ್ಯ ನಡೆಯುತ್ತಿತ್ತಂತೆ ಇವರು ಪವಾಡ ಪುರುಷರು.

ಯಾರಾದರೂ ಮಾಟ ಮಂತ್ರ ಮಾಡಿದರೆ ಇವರ ಹತ್ತಿರ ಬಂದು ಪಾಂಡುರಂಗನ ದರ್ಶನ ಮಾಡಿ ಗ್ಯಾನರಾವ ಮಹಾರಾಜ ಕೊಡುವ ತೀರ್ಥವನ್ನು ಸೇವಿಸಿದರೆ ಸಾಕು ಆರೋಗ್ಯವಾಗುತ್ತಿತ್ತಂತೆ. ಹಲಕೊಡ ಗ್ರಾಮದ ಪೋಲಿಸ ಪಾಟೀಲ್ ಎಂಬ ಮನೆಯ ಬಸವರಾಜ ಆತನ ಹೆಂಡತಿ ಪಾರ್ವತಿ ಇವಳಿಗೆ ಮದುವೆಯಾದ ನಂತರ ಆನಾರೋಗ್ಯದಿಂದ ಇದ್ದರು ಇವರು ಗ್ಯಾನರಾವ ಮಹಾರಾಜರ ಹತ್ತರ ಹೋದಾಗ ತೀರ್ಥವನ್ನು ಕುಡಿದರು ಆಗ ಕಡಿಮೆಯಾಯಿತಂತೆ ಹಾಗೆಯೇ ಪ್ರತಿದಿನ ಪಾಂಡುರಂಗನ ದರ್ಶನ ಮಾಡು ಎಂದು ಹೇಳಿದಾಗ ಸರಿ ಆಯಿತ್ತು ಎಂದು ಹಿಂದಿನ ದಿನ ಹಿಡಿದು ಇಂದಿನವರೆಗೂ ಪಾಂಡುರಂಗನ ದರ್ಶನ ಮಾಡಿ ಆಹಾರ ಸೇವಿಸುತ್ತಾರೆ. ಹೀಗೆ ಹಲವಾರು ಜನರಿಗೆ ಇಲ್ಲಿ ಆರಾಮವಾಗಿದೆ.

ಜ್ಞಾನರಾವಮಹಾರಾಜನಿಗೂ ಸಹ ಒಬ್ಬನೆ ಮಗನು ಈತನಿಗೆ ತನ್ನ ಮುತ್ತಾತನಾದ ಜಯ ಮಹಾರಾಜನ ಹೆಸರು ಇಟ್ಟಿದ್ದರು. ಮಹಾರಾಜರು ನಿಧನವಾದಾಗ (ಚಿತೆಯಲ್ಲಿ ಸುಡುವಾಗ) ದುಡುವಾಗ ಇವರು ಹಾಕಿಕೊಂಡಿರುವ ಜನಿವಾರ ಸುಟ್ಟಿವಂತೆ ಅವರ ಅಷ್ಟು ದೇಹ ಸುಟ್ಟು ಬೆಂಕಿಯಾಗಿ ಬೂದಿಯಾದರೂ ಅವರ ಜನಿವಾರ ಮೊದಲು ಅವರ ದೇಹದ ಮೇಲೆ ಹೇಗಿತ್ತು ಹಾಗೆಯೇ ಇದ್ದತ್ತಂತೆ. ಅದನ್ನು ತೆಗೆದುಕೊಂಡು ಒಂದು ತುಳಸಿ ಕಟ್ಟೆಯನ್ನು ಕಟ್ಟಿ ಒಳಗೆ ಮಣ್ಣಿನಲ್ಲಿ ಹಾಕಿ ಮೇಲೆ ಗಿಡವನ್ನು ನೆಟ್ಟರಂತೆ, ಅವರ ಹೆಂಡತಿಯಾದ ಸಕ್ಕುಬಾಯಿ ಸೀರೆಯ ನಿಲುಗಿಯ ಸಹ ಬೆಂಕಿಯಲ್ಲಿ ಸುಟ್ಟಿಲ್ಲವಂತೆ ಅಂದರೆ ಇವರು ಅಷ್ಟು ನಿಷ್ಟಾವಂತರಾಗಿ ಬಾಳಿದ್ದಾರೆ ಎಂದು ತಿಳಿದು ಬರುತ್ತದೆ.

**ಮರಿ ಮೊಮ್ಮಗನಾದ ಜಯರಾಮ ಮಹಾರಾಜ :**

ಇತನಿಗೆ ಮೂರು ಜನ ಹೆಂಡತಿಯರು ಮೊದಲನೆಯ ಹೆಂಡತಿಯ ಹೆಸರು ಪದ್ಮಾವತಿ, ಎರಡನೇಥ ಹೆಂಡತಿ, ರಾಧಾಬಾಯಿ, ಮೂರನೇ ಹೆಂಡತಿ ಪದ್ಮಾವತಿ, ಮೂರು ಜನ ಹೆಂಡತಿಯಾರಾಗಲು ಕಾರಣ ತನ್ನ ಮನೆಗೆ ವಂಶದ್ಧಾರಕನ ಸಲುವಾಗಿ ಆದರೆ ಇವರಿಗೆ ಗೊತ್ತಿಲ್ಲ ನಮ್ಮ ಸಂತಾನ ಇಲ್ಲಿಗೆ ನಿಂತು ಹೋಗುತ್ತದೆ ಎಂದು ಮೂರು ಜನ ಪತ್ನಿಯರು ಅದೆಷ್ಟೋ ಪೂಜೆ ಪುನಸ್ಕಾರ ಮಾಡಿದರು ಸಹ ಮಕ್ಕಳಾಗಲಿಲ್ಲ ನಂತರ ಸತ್ಯ ತಿಳಿಯುತ್ತದೆ. ಜಯರಾಮ ಮಹಾರಾಜನು ಮೇಧಾವಿಯಾಗಿದ್ದನು ಪಾಂಡುರಂಗನ ಭಕ್ತನಾಗಿದ್ದನು ತನ್ನ ಕೊನೆಯ ಜೀವನ ಪಾಂಡುರಂಗನ ಭಕ್ತನಾಗಿದ್ದನು ತನ್ನ ಕೊನೆಯ ಜೀವನ ಪಾಂಡುರಂಗನ ಸೇವೆಯಲ್ಲಿಯೇ ಕಳೆದನು.

ಜಯಮಹಾರಾಜನ ಮೂರನೇ ಹೆಂಡತಿಯು ಇಲ್ಲಿಗೆ ನಮ್ಮ ಮನೆಯ ಬೆಳಕು ಹಾಳಾಗಬಾರದು ಪಾಂಡುರಂಗ್ನ ದೇವಸ್ಥಾನ ಕತ್ತಲೆಯಾಗಿ ಹೋಗಬಾರದು ಎಂದು ಧೈರ್ಯ ಮಾಡಿಕೊಂಡು ತನ್ನ ಗಂಡನಿಗೆ ನನ್ನ ತಮ್ಮನಾದ ಪ್ರಹ್ಲಾದನನ್ನು ಮನೆಯ ಮಗನೆಂದು

ಕರೆದು ತರೋಣ ಎಂದು ಹೇಳಿದಳು. ಅಗ ಮಹಾರಾಜನು ಇದಕ್ಕೆ ಅನುಮತಿ ನೀಡಿದನು. ಪದ್ಮವತಿಗೆ ಮೂರು ಜನ ತಮ್ಮಂದಿರು ಅದರಲ್ಲಿ ಕೊನೆಯ ತಮ್ಮನಿಗೆ ತನ್ನ ಮನೆಯ ದೀಪವನ್ನು ಬೆಳಗಲೆಂದು ತಂದುಕೊಂಡು ತನ್ನ ವಂಶಕ್ಕೆ ಉತ್ತರಾಧಿಕಾರಿಯೆಂದು ಘೋಷಣೆ ಮಾಡಿದಳು.

ಪ್ರಹ್ಲಾದ ಮಹಾರಾಜನ ಊರು ಚಿತ್ತಾಪೂರ ಪ್ರಹ್ಲಾದನಿಗೆ ಲಲಿತಾಬಾಬ ಎನ್ನುವ ಕನ್ಯೆಯನ್ನು ತಂದು ವಿವಾಹ ಮಾಡಿದರು. ಲಲಿತಾಬಾಯಿ ಅವರ ಊರು ಕಡೆಚೂರ ಇವರಿಗೆ 6 ಜನ ಮಕ್ಕಳು ಜಯಶ್ರೀ, ವಿಠ್ಠಲ ಮಹಾರಾಜ, ಅಂಬುಜ, ಸಕ್ಕುಬಾಯಿ, ಚಂದ್ರಲೇಖ, ಜಯರಾಮ ಮಹಾರಾಜ, ಹೆಣ್ಣು ಮಕ್ಕಳಿಗೆ ವಿವಾಹ ಮಾಡಿ ಕೊಟ್ಟಿದ್ದಾರೆ. ಗಂಡು ಮಕ್ಕಳು ಪಾಂಡುರಂಗನ ಸೇವೆ ಮಾಡುತ್ತಾ ಕೃಷಿಯಲ್ಲಿ ತೊಡಗಿದ್ದಾರೆ. ವಿಠ್ಠಲ ಮಹಾರಾಜರ ಹೆಂಡತಿಯ ಹೆಸರು ಪದ್ಮವತಿ ಇವರಿಗೆ ಇಬ್ಬರು ಜ್ಞಾನೇಶ ಮತ್ತು ವಾಣಿ.

ದೇವರ ಉತ್ಸವಗಳನ್ನು ತಪ್ಪದೆ ಮಾಡಿಕೊಂಡು ಹೋಗುತ್ತಿದ್ದಾರೆ ಜಯರಾಮ ಮಹಾರಾಜರು 475 ವರ್ಷಗಳಾಯಿತು ಮರಣವಪ್ಪಿ ಅವರ ಹೆಸರಿನಲ್ಲಿ ಶುದ್ಧ ಪುಷ್ಯ ಎಳ್ಳಮಸಿಯಂದು ದೀಪರಾಧನೆ ಮಾಡಿ ಆತನ ಹೆಸರಿನಲ್ಲಿ ಪಲ್ಲಕಿಯನ್ನು ಮೆರವಣಿಗೆ ಮಾಡುತ್ತಾರೆ. ಹಲವಾರು ಭಕ್ತಾದಿಗಳು ಅಂದಿನ ದಿನ ಪಲ್ಲಕಿ ಉತ್ಸವದಲ್ಲಿ ಸೇರುತ್ತಾರೆ. ಇದಿಷ್ಟು ದೀರ್ಘ ಮಾಹಿತಿಯನ್ನು ದೇವಸ್ಥಾನದ ಇಂದಿನ ಆರ್ಚಕರು ಮತ್ತು ಊರವರು ನೀಡಿದ್ದನ್ನು ಆಧರಿಸಿ ಸಂಗ್ರಹಿಸಲಾಗಿದೆ.

### ೪.೫ ನಾಗಮ್ಮದೇವಿಯ ಚರಿತ್ರೆ – ಹಲಕೂಡ :

ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲೂಕಿನಿಂದ 27 ಕಿ.ಮೀ. ದೂರದಲ್ಲಿರುವ ಹಲಕೂಡ ಎಂಬ ಗ್ರಾಮವಿದೆ. ಈ ಗ್ರಾಮದಲ್ಲಿ ನಾಗಮ್ಮದೇವಿಯ ದೇವಸ್ಥಾನದ ಚರಿತ್ರೆಯನ್ನು ನಾವು ತಿಳಿದುಕೊಳ್ಳೋಣ.

ಊರು– ಹಲಕೂಡ ತಾ॥ ಚೊಂಚೋಳಿ ಜಿ॥ ಗುಲಬರ್ಗಾ

ದೇವಸ್ಥಾನದ ಹೆಸರು– ನಾಗಮ್ಮದೇವಿ ದೇವಸ್ಥಾನ

ಕಾಲಮಾನ– 20ನೇ ಶತಮಾನ

ಭಾಷೆ – ಕನ್ನಡ, ತೆಲಗು

### ನಾಗಮ್ಮ ದೇವಿಯ ಚರಿತ್ರೆ :

ಸಿದ್ದಪ್ಪ ಎಂಬ ವ್ಯಕ್ತಿ ಇದ್ದನು ಇವರಿಗೆ ಇಬ್ಬರು ಮಕ್ಕಳು ಇವರ ಮನೆಯ ಹೆಸರು ಪೋಲಿಸ್ ಪಾಟೀಲ್ ಊರಿನಲ್ಲಿ ಪೋಲಿಸ್ ಪಾಟೀಲ್ ಮನೆತನಕ್ಕೆ ಊರಲ್ಲಿ ಆಗು ಹೋಗುವ ಬಗ್ಗೆ ನ್ಯಾಯ ಪಂಚಾಯತಿ ಮಾಡಲು ಅನುಮತಿ ಕೊಡುತ್ತಿದ್ದರು. ಸಿದ್ದಪ್ಪ ಬಹಳ ಒಳ್ಳೆಯ ವ್ಯಕ್ತಿ ಊರಲ್ಲಿ ದಾನ ಧರ್ಮ ನ್ಯಾಯ ಅನ್ಯಾಯಗಳೂ ಎಲ್ಲವನ್ನು ನೋಡಿಕೊಳ್ಳುತ್ತಿದ್ದರು. ಅವರ ವೃತ್ತಿ ವ್ಯವಸಾಯವಾಗಿತ್ತು ಮನೆಯ ಮುಂದೆ ನಾಲ್ಕಾರು

ಜನರು ಆಳುಗಳು ದುಡಿಯುತ್ತಿದ್ದರು. ಇವರ ಮೊದಲನೆ ಮಗನು ಭೂದೆಪ್ಪ, ಮಗಳು ನಾಗಮ್ಮ ಅಣ್ಣ ತಂಗಿಯ ಪ್ರೀತಿ ಅನ್ಯೋನ್ಯವಾಗಿತ್ತು. ಅಣ್ಣನ ಮಾತು ಅಂದರೆ ತಂಗಿಗೆ ವೇದವಾಖ್ಯವಂತೆ ಅಣ್ಣನು ಸಹ ಹಾಗೆಯೇ ತಂಗಿಯ ಮೇಲೆ ಅತಿಯಾದ ಪ್ರೀತಿಯಿಂದ ಇದ್ದನು. ನಾಗಮ್ಮ ದೇವಿಯು ದೊಡ್ಡವಳಾದ ನಂತರ ಮದುವೆ ಮಾಡಿಕೊಡಬೇಕೆಂದು ಸಿದ್ದಪ್ಪ ಪಕ್ಕದಲ್ಲಿರುವ ಊರಾದ ಇಂದ್ರಖೇಡ ಎಂಬ ಗ್ರಾಮ ಅಲ್ಲಿ ಪೋಲಿಸ್ ಗೌಡರ ಮನೆಗೆ ಸಂಬಂಧವನ್ನು ಬೆಳೆಸಿಕೊಂಡು ತನ್ನ ಮಗಳಿಗೆ ವಿವಾಹ ಮಾಡಿಕೊಟ್ಟನು. ಅಣ್ಣನು ಸಹ ತಂಗಿಗೆ ತಕ್ಕವರವನ್ನು ಸಿಕ್ಕಿದೆ ಎಂದು ಸಂತೋಷಪಟ್ಟನು. ನಾಗಮ್ಮಳ ಗಂಡನ ಹೆಸರು ಬಸವಂತರಾವ ಈತನು ನೋಡಲು ಬಲು ಸುಂದರವಾಗಿದ್ದ ಆದರೆ ಒಳಗೆ ಕೆಟ್ಟವನಾಗಿದ್ದನು. ನಾಗಮ್ಮಳ ವಿವಾಹ ಬಹಳ ಅದ್ದೂರಿಯಿಂದ ಆಯಿತು. ನಾಗಮ್ಮಳು ಗಂಡನ ಮನೆಗೆ ಹೋದಳು. ಭೂದೆಪ್ಪ ಬಹಳ ಕೋಪಿಷ್ಟ ಹಾಗೂ ಗರ್ವಿಕೆಯ ಮನುಷ್ಯನಾಗಿದ್ದನು. ಇವನು ತನ್ನ ತಂದೆಗೆ ವಿಶ್ರಾಂತಿಯನ್ನು ಕೊಟ್ಟು ವ್ಯವಸಾಯದ ಕೆಲಸವನ್ನು ತಾನೇ ಮಾಡಿಕೊಂಡು ಹೋಗುತ್ತಿದ್ದನು. ಇವನಿಗೆ ಸಹ ವಿವಾಹವಾಯಿತು ನಾಗಮ್ಮಳ ಸಂಸಾರ ಸ್ವಲ್ಪ ದಿವಸ ಚೆನ್ನಾಗಿ ನಡೆಯಿತು. ನಂತರ ತನ್ನ ಗಂಡ ಬಸಂತರಾವ ಮತ್ತು ಅತ್ತೆ ಆಕೆಗೆ ಕಿರುಕುಳ ಕೊಡಲು ಶುರು ಮಾಡಿದರು. ಆದರೂ ಸಹ ನಾಗಮ್ಮ ಸಹಿಸಿಕೊಂಡು ಸಂಸಾರ ಮಾಡಿಕೊಂಡು ಹೋಗುತ್ತಿದ್ದಳು ಆದರೆ ಒಂದು ದಿವಸ ಆಕೆಯ ಗಂಡ ಆಕೆಯನ್ನು ಹೊಡೆದಿದ್ದರಿಂದ ನಾನು ತನ್ನ ತವರು ಮನೆಗೆ ಹೋದರಾಯಿತೆಂದು ಮನಸ್ಸಿನಲ್ಲಿ ಅಂದುಕೊಂಡಳು. ಹಳ್ಳಕ್ಕೆ ನೀರಿಗೆ ಬಂದಳು ಕೊಡವನ್ನು ತೆಗೆದುಕೊಂಡು ತನ್ನ ತವರು ಮನೆಯ ಆಳುಮಗನನ್ನು ಎತ್ತುಗಳು ಹೊಡೆದುಕೊಂಡು ನೀರನ್ನು ಕುಡಿಸಲು ಅದೇ ಹಳ್ಳಕ್ಕೆ ಹೋಗಿದ್ದನು. ಆತನನ್ನು ಕಂಡು ಸಂತಸಪಟ್ಟಳು ನನ್ನ ತವರು ಮನೆಯ ವ್ಯಕ್ತಿ ಇಲ್ಲಿಯೆ ಬಂದಿದ್ದಾನೆ ನಾನು ಅವನ ಜೊತೆ ತನ್ನ ತವರು ಮನೆಗೆ ಹೋದರಾಯಿತೆಂದು ಕೊಡವನ್ನು ಹಳ್ಳದಲ್ಲಿಯೇ ಬಿಟ್ಟು ಆಳು ಮಗನ ಜೊತೆ ತವರು ಮನೆಗೆ ಬಂದಳು.

ಹಿಂದಿನ ಕಾಲದ ಗೌಡರ ಮನೆತನದವಳು ಬಹಳ ದೊಡ್ಡದಾಗಿರುತ್ತಿದ್ದನು. ಮನೆಯ ಹೆಬ್ಬಾಗಿಲಿನಿಂದ ಬಂದರೆ ನಾನು ಮನೆಗೆ ಬಂದಿರುವುದು ಊರ ಜನರಿಗೆ ಗೊತ್ತಾಗುತ್ತದೆ. ಗಂಡನ ಮನೆ ಬಿಟ್ಟು ಬಂದಿದ್ದಾಳೆ ಎಂದು ಜನ ಮಾತನಾಡಿಕೊಳ್ಳುತ್ತಾರೆ ಎಂದು ಮನೆಯ ಹಿಂದಿನ ಹಿತ್ತಲ ಬಾಗಿಲಿನಿಂದ ತವರು ಮನೆ ಸೇರಿಕೊಂಡಳು. ತಂಗಿ ನಾಗಮ್ಮ ಬಂದಿರುವ ಸ್ಥಿತಿಯನ್ನು ಕಂಡು ಅಣ್ಣ ಭೂದೆಪ್ಪ ಬೆರಗಾದನು ಎಂತಹ ಸ್ಥಿತಿಯಲ್ಲಿ ನನ್ನ ತಂಗಿ ತವರಿಗೆ ಬಂದಿದ್ದಾಳೆ ಎಂದು ಕೋಪಗೊಂಡನು ತಂಗಿಯನ್ನು ಒಂದು ಕೋಣೆಯಲ್ಲಿ ಕರೆದು ಕೂಡಿಸಿ ಬಿಟ್ಟನು ಆದರೆ ಆಕೆಯ ಕಷ್ಟವನ್ನು ಒಂದು ಕೇಳಲಿಲ್ಲ. ಆಕೆಯನ್ನು ಕರೆದುಕೊಂಡು ಒಂದು ಮಾತನಾಡದೆ ನಮ್ಮ ಮನೆಯ ಮಾನವನ್ನು ಕಳೆದು ಬಿಟ್ಟಲ್ಲ. ನಮ್ಮ ಮನೆಯು ಹೆಸರಾಗಿರುವ ಮನೆ ಎಂದು ಕೋಪದಿಂದ ಹಿಂದೆ ದೊಡ್ಡಿಯಲ್ಲಿ ಅಗಸಿ ಹಾಕುವ ಒಂದು ಹಗೆಯಲ್ಲಕಿ ಆಕೆಯನ್ನು ಹಾಕಿ ಮುಚ್ಚಿ ಬಿಟ್ಟನು. ನಾಗಮ್ಮಳು ಅಣ್ಣ ಅಣ್ಣ ಎಂದು ಕಿರುಚಿದರು ಕೇಳಿಸಿಕೊಳ್ಳದೆ ಮೇಲೆ ಅಗಸಿ ಕಾಳುಗಳನ್ನು ಹಾಕಿ ಆಕೆಯನ್ನು ಜೀವಂತವಾಗಿ ಹೂಳಿ

ಬಿಟ್ಟನು. ನಾಗಮ್ಮಳು ಹದಿಮೂರು ದಿವಸ ತನ್ನ ಉಸಿರು ಹಿಡಿದುಕೊಂಡು ಹೋಹೋ ಎಂದು ಕೊರಗಿದಳಂತೆ.

ಎರಡು ದಿವಸಗಳಾದ ನಂತರ ಇಂದ್ರಖೇಡಲಿಂದ ನಾಗಮ್ಮಳ ಗಂಡ ಬಸಂತರಾಯ ನಾಗಮ್ಮಳನ್ನು ಹುಡುಕಿಕೊಂಡು ಬಂದು ಕೇಳಿದಾಗ ಇಲ್ಲ ನನ್ನ ತಂಗಿ ತವರಿಗೆ ಬಂದಿಲ್ಲ ಎಂದು ಕೋಪದಿಂದ ಹೇಳದನಂತೆ ಭೂದೆಪ್ಪ. ಬಸಂತರಾಯನು ನಾಗಮ್ಮಳು ಹೊಳೆ ನೀರಿಗೆ ಅಂತ ಹೋಗಿ ಹಿಂತುರುಗಿ ಬಂದಿಲ್ಲ ಅದಕ್ಕಾಗಿ ಎಲ್ಲ ಕಡೆಗೆ ಹುಡುಕಾಡಿದೆ ಎಲ್ಲಿ ಸಿಗಲಿಲ್ಲ ನಿಮ್ಮ ಹತ್ತಿರ ಬಂದಿರಬಹುದೇನೋ ಎಂದು ಇಲ್ಲಿಗೆ ಬಂದಿದ್ದೇನೆ ಎಂದು ಹೇಳಿದ.

ಸಿದ್ದಪ್ಪ ಇಲ್ಲ ನನ್ನ ಮಗಳು ಇಲ್ಲಿಗೆ ಬಂದಿಲ್ಲ ನೀವೆ ಏನೋ ಮಾಡಿದಿರಿ ಎಂದು ಅಳತೊಡಗಿದನು. ಆದರೆ ಭೂದೆಪ್ಪನಿಗೆ ಭಯ ಶುರುವಾಯಿತು ಕೋಪದಲ್ಲಿ ಆಕೆಯನ್ನು ಗವಿಯಲ್ಲಿ ಹಾಕಿ ಮುಚ್ಚಿ ಬಿಟ್ಟಿದ್ದಾನೆ. ಭೂದೆಪ್ಪನಿಗೆ ಮನಸಲ್ಲಿ ತಳಮಳ ನನ್ನ ತಂಗಿ ಸತ್ತು ಹೋಗಿರಬಹುದು ಈಗ ನಾನು ಹೊರಗಡೆ ಹೋದರೆ ನನ್ನನ್ನು ಎಲ್ಲರು ದೂರುವರು ಎಂದು ಸುಮ್ಮನಾದನು. ನಾಗಮ್ಮಳ ತಂದೆ ತಾಯಿ ನಾಗಮ್ಮನ ಕೊರಗಿನಲ್ಲಿಯೇ ಮರಣವನ್ನಪ್ಪಿದರು. ಭೂದೆಪ್ಪನಿಗೆ ತನ್ನ ಹೆಂಡತಿ ನೀವು ತಪ್ಪು, ಮಾಡಿದ್ದಿರಿ ಅವಳ ಸಾವು ನಮಗೆ ಸುಮ್ಮನೆ ಬಿಡುವುದಿಲ್ಲ ಎಂದು ಹೇಳುವಾಗ ಆಕೆಯ ಬಾಯಿಯನ್ನು ಮುಚ್ಚಿಬಿಟ್ಟನು. ಗೌರಮ್ಮ ಸುಮ್ಮನಾದಳು ತನ್ನ ಮಗಳು ಬಸಮ್ಮ ಒಬ್ಬಳೆ ಮಗಳು ಗಂಡು ಸಂತಾನ ಇಲ್ಲದಿರುವುದರಿಂದ ಈಕೆಯನ್ನು ಮನೆಯಲ್ಲಿ ಇಟ್ಟುಕೊಂಡು ವಿವಾಹ ಮಾಡಿದರು.

ನಾಗಮ್ಮಳ ಶಾಪ ಭೂದೆಪ್ಪನಿಗೆ ಬಿಡಲಿಲ್ಲ ಆತನನ್ನು ಹಲವಾರು ಭಾದೆಗಳಿಂದ ಕಾಡಿಸಿ ಪೀಡಿಸ ಆತನ ಮನೆಯನ್ನು ಸರ್ವನಾಶ ಮಾಡಿದಳು. 24 ಕಂಬವಿರುವ ಆ ಮನೆಯು 20 ಕಲ್ಲುಗಳು ಆ ಜಾಗದಲ್ಲಿ ಇಲ್ಲದಂತೆ ಮಾಡಿದಳು. ಮನೆಯಲ್ಲಿರುವ ಎಲ್ಲಾ ವಸ್ತುಗಳು ಮಾರಿ ತಮ್ಮ ಜೀವನ ನಡೆಸುತ್ತಿದ್ದರು. ಊರಲ್ಲಿ ದೊಡ್ಡ ಜಮೀನ್ದಾರು ಆದರೆ ತಿನ್ನಲ್ಲಿಕೆ ಗತಿ ಇಲ್ಲದಂಅತೆ ಆಯಿತು. ಅಷ್ಟೊಂದು ಶಾಪ ಭೂದೆಪ್ಪನಿಗೆ ಹಾಕಿದಳು. ಭೂದೆಪ್ಪ ಬಹಳ ನೋವನ್ನು ಅನುಭವಿಸಿ ಮನೆಯ ಮುಂದಿನ ಎಲ್ಲಾ ಆಸ್ತಿಯನ್ನು ಮಾರಿ ಬಿಟ್ಟು ಹೀನಾಯಿ ಸ್ಥಿತಿಗೆ ತಂದುಬಿಟ್ಟಳು. ಗೌರಮ್ಮ ಆ ಎಲ್ಲ ನೋವನ್ನು ಸಹಿಸಿಕೊಂಡು ಕೊನೆಗೆ ಜೀವವನ್ನು ಬಿಟ್ಟಳು.

ಭೂದೆಪ್ಪನ ಮಗಳು ಬಸಮ್ಮನಿಗೆ ಇಬ್ಬರು ಗಂಡು ಮಕ್ಕಳು ಸಿದ್ದಪ್ಪ, ಶರಣಪ್ಪ ಕಷ್ಟದಲ್ಲಿಯೇ ಸಂಸಾರ ನಡೆಸಿಕೊಂಡು ಗಂಡ ಹೆಂಡತಿ ಮಕ್ಕಳು ಚೆನ್ನಾಗಿ ಬದುಕುತ್ತಿದ್ದರು. ಮುಂದೆ ಶರಣಪ್ಪ ಸ್ವಲ್ಪ ವಿದ್ಯಾಭ್ಯಾಸ ಮುಗಿಸಿಕೊಂಡನು ಸಿದ್ದಪ್ಪ ವ್ಯವಸಾಯದ ಕೆಲಸದಲ್ಲಿ ತೊಡಗಿದನು. ಇಲ್ಲಿ ನಾಗಮ್ಮ ದೇವಿಯು ಬಸಮ್ಮಳ ಮಕ್ಕಳಾದ ಸಿದ್ದಪ್ಪ/ ಶರಣಪ್ಪರಿಗೆ ಯಾವುದೇ ರೀತಿಯ ತೊಂದರೆ ನೀಡಿಲ್ಲ ಮುಂದೆ ಬರು ಬರುತ್ತಾ ಸಿದ್ದಪ್ಪ ಮನೆಯ ವಾರಸುದಾರನಾಗಿ ನಿಂತನು ಈತನಿಗೆ ಮೂರು ಜನರ ಗಂಡು ಮಕ್ಕಳು ಬಸವರಾಜ, ಪೀತಂಬರರಾವ, ಚಂದ್ರಶೆಟ್ಟಿ ಎರಡು ತಲೆಮಾರಿನಿಂದ ಹೆಣ್ಣು ಮಕ್ಕಳ ಜನನವಾಗಿಲ್ಲ.

ಪೀತಂಬರರಾವ ಮತ್ತು ಚಂದ್ರಶೆಟ್ಟಿಯವರು ಮದುವೆಯಾದ ನಂತರ ಬದುಕಲು ವಲಸೆ ಹೋದರು ನಗರಕ್ಕೆ ಬಸವರಾಜು ಮಾತ್ರ ತನ್ನ ಹೆಂಡತಿಯಾದ ಪಾರ್ವತಿಯ ಜೊತೆಗೆ

ತನ್ನ ಚಿಕ್ಕ ಸಂಸಾರವನ್ನು ನಡೆಸಿಕೊಂಡು ಹೋಗುತ್ತಿದ್ದಾನೆ. ಸಿದ್ದಪ್ಪ ಗಂಗಮ್ಮಳು ತನ್ನ ಜೀವನವನ್ನು ಹಲಕೋಡ ಗ್ರಾಮದಲ್ಲಿಯೇ ಮುಗಿಸಿದರು. ಬಸವರಾಜನು ಮದುವೆಯಾದ ಪಾರ್ವತಿಯನ್ನು ಸ್ವಲ್ಪ ಕಾಲ ಕಾಡಿಸಿದಳು ನಾಗಮ್ಮ. ಮದುವೆಯಾದ ಆರು ತಿಂಗಳ ನಂತರ ಆಕೆಯನ್ನು ಸತಾಯಿಸಿದಳು ಪಾರ್ವತಿಯನ್ನು ಊಟ ಮಾಡದಂತೆ ನೀರು ಕುಡಿಯದಂತೆ ಕಾಡಿದಳು. ಹಲವಾರು ಕಡೆಯಲ್ಲಿ ದೇವಸ್ಥಾನಗಳಿಗೆ ತಿರುಗಿದರು ಸಹ ಕಡಿಮೆಯಾಗಲಿಲ್ಲ ಕೊನೆಗೆ ಪಾಂಡುರಂಗನ ದೇವಸ್ಥಾನದಲ್ಲಿ ಗ್ಯಾನರಾವ್ ಮಹಾರಾಜರು ಆಕೆಯನ್ನು ಗುಣಪಡಿಸಿದರು. ಯಾರು ನೀನು ಯಾಕೆ ಇಷ್ಟೊಂದು ಸತಾಯಿಸುತ್ತಿರುವೆ ಎಂದು ಕೇಳಿದಾಗ ನಾನು ಈ ಮನೆಯ ಹಿರಿಯ ಹೆಣ್ಣು ಮಗಳು ನನಗೆ ಬಹಳ ಅನ್ಯಾಯವಾಗಿದೆ ಎಂದು ನಡೆದ ಘಟನೆಯನ್ನು ಪಾರ್ವತಿಯ ಮೈತುಂಬಿ ಹೇಳಿದಳು.

ಕೆಲವು ದಿನಗಳ ನಂತರ ಪಾರ್ವತಮ್ಮ ಹುಷಾರಾದಳು. ಇವರಿಗೆ ಮೂರು ಜನ ಗಂಡು ಮಕ್ಕಳು, ಜಯನಾಗೇಂದ್ರ, ಶಿವನಾಗೇಂದ್ರ, ಜಗನಾಗೇಂದ್ರ ತನ್ನ ಮಕ್ಕಳಿಗೆ ನಾಗಮ್ಮಳ ಹೆಸರು ಬರುವಂತೆಯೇ ನಾಮವನ್ನು ಇಟ್ಟಳು. ಇಂದಿಗೂ ಸಹ ಪಾರ್ವತಮ್ಮಳ ಮೈಯಲ್ಲಿ ಆಗಾಗ ನಾಗಮ್ಮಳು ಬಂದು ಮುಂದಾಗುವ ಕೆಲವು ಅನಾಹುತಗಳು ಸೂಕ್ಷ್ಮವಾಗಿ ತಿಳಿಸಿ ಹೋಗುತ್ತಾಳೆ. ಮನೆಯಲ್ಲಿ ಆಕಯು ಬರಬೇಕೆಂದೆನಿಸಿದಾಗ ನಾಗ ರೂಪದಲ್ಲಿ ಬಂದು ಹೋಗುತ್ತಾಳೆ ಅವರ ಮನೆಯಲ್ಲಿ ಬಂದಿರುವ ಶೀಷವನ್ನು ನಾಗಮ್ಮಳು ಬಂದಿದ್ದಾಳೆಂದು ಅದನ್ನು ಯಾರು ಹೊಡೆಯುವುದಿಲ್ಲ.

ಇಲ್ಲಿ ನಾಗಮ್ಮ ಅದೇ ಊರಿನಲ್ಲಿ ಕುಂಬಾರ ಮನೆಯಲ್ಲಿಯೂ ಸಹ ಒಬ್ಬ ಹೆಣ್ಣು ಮಗಳ ದೇಹದಲ್ಲಿ ಬರುತ್ತಾಳೆ ಅವರು ಈಕೆಯನ್ನು ಪ್ರತಿ ದಿನ ಪೂಜಿಸುತ್ತಾರೆ. ಈಕೆಯನ್ನು ಪೂಜೆ ಮಾಡುವುದರಿಂದಲೂ ಅವರ ಮನೆಯು ಯಾವುದೇ ಕಷ್ಟಕ್ಕೆ ಸಿಲುಕದೆ ಹಣ, ಅನ್ನದ ಐಶ್ವರ್ಯದ ಕೊರತೆ ಇಂದಿಗೂ ಬಂದಿಲ್ಲ. ಪ್ರತಿ ಅಮವಾಸೆಯಂದು ಆಕೆಯನ್ನು ಊರಲ್ಲಿರುವ ಜನರು ಕಾಯಿ ಕರ್ಪೂರ ತಂದು ಪೂಜಿಸಿ ಆಕೆಯನ್ನು ನಮಸ್ಕರಿಸಿ ಹೋಗುತ್ತಾಳೆ. ಆಕೆಯ ಅಗಸಿಯ ಗವಿಯಲ್ಲಿ ಮರಣವಪ್ಪಿದರಿಂದ ಅಲ್ಲಿಯೆ ಮೇಲ್ಭಾಗದಲ್ಲಿ ದೇವಸ್ಥಾನವನ್ನು ಕಟ್ಟಿಸಿದ್ದಾರೆ. ಪ್ರತಿದಿನ ಪೂಜೆಯನ್ನು ಮಾಡುತ್ತಾರೆ. ಇಂದು ಈ ನಾಗಮ್ಮ ದೇವಿಯ ಮನೆತನದವರಿಗೆ ಮತ್ತು ತನ್ನ ತವರು ಮನೆಗೆ ನಾಗಮ್ಮಳ ಅಣ್ಣನ ಮಗಳಾದ ಬಸಮ್ಮಳು ಕೊನೆಯ ಹೆಣ್ಣು ಮಗಳು ಇದುವರೆಗೂ ಹೆಣ್ಣಿನ ಸಂತಾನವನ್ನು ನೀಡಿಲ್ಲ. ಹಾಗೆಯೇ ಇವರ ಸಂತಾನ ಇಲ್ಲಿಗೆ ಮುಗಿಯುವ ಹಾಗೆನು ಮಾಡಿಲ್ಲ.

ಆಕೆಯ ಗರ್ಭಗ್ರಹದಲ್ಲಿ ನಾಗದೇವತೆಯ ಐದು ಹೆಡೆಯ ನಾಗಿಣಿಯ ರೂಪವನ್ನು ಕೆಳಗಡೆ ಆಕಯೆ ಮುಖದ ರೂಪವನ್ನು ಕೆತ್ತಿಸಿ ತಂದು ಇಟ್ಟು ಪೂಜೆ ಮಾಡುತ್ತಲಿದ್ದಾರೆ. ಸ್ತ್ರೀ ದೇವತೆಯಾದ ನಾಗಮ್ಮನ ಪೂಜೆ ಊರಲ್ಲಿ ಇಂದು ಎಲ್ಲರೂ ಆಚರಿಸುತ್ತಿದ್ದಾರೆ. ತವರಲ್ಲಿ ಆಕೆ ಅನುಭವಿಸಿದ ಕಷ್ಟ ಕೇಳಿ ಊರಲ್ಲಿ ನೂರು ಮನೆ ಹೆಣ್ಣು ಮಕ್ಕಳಿಗೆ ಅಗೌರವ ಸೂಚಿಸುವುದಾಗಲಿ, ಅನ್ಯಾಯವಾಗಲಿ ಮಾಡಲು ಹೋಗುವುದಿಲ್ಲ. ಅಷ್ಟರಮಟ್ಟಿಗೆ ನಾಗಮ್ಮ ತಾಯಿ ತನ್ನ ಬದುಕಿನಲ್ಲಿ ಕಷ್ಟ ಅನುಭವಿಸಿದರೂ ಊರ ಹೆಣ್ಣು ಮಕ್ಕಳಿಗೆ ಅಭಯಹಸ್ತ ಚಾಚಿದ್ದಾಳೆ.

## ೪.೬ ಪಾಪನಾಶ ದೇವಸ್ಥಾನದ ಚರಿತ್ರೆ –ಮಿರಿಯಾಣ :

| | | |
|---|---|---|
| ಊರು | – | ಮಿರಿಯಾಣ ತಾ॥ ಚಿಂಚೋಳಿ ಜಿ॥ ಗುಲಬರ್ಗಾ |
| ದೇವಸ್ಥಾನದ ಹೆಸರು | – | ಪಾಪನಾಶ ದೇವಸ್ಥಾನ |
| ದೇವಸ್ಥಾನದ ಕಾಲ | – | 12ನೇ ಶತಮಾನ |
| ಅರಸು ಮನೆತನ | – | ಕಲ್ಯಾಣಿ ಚಾಲುಕ್ಯರು |
| ಪ್ರಸ್ತುತ ಮೇಲ್ವಿಚಾರಣೆ | – | ಊರಿನ ಜನರಿಂದ |
| ಪ್ರಸ್ತುತ ಸ್ಥಿತಿಗತಿ | – | ಜೀರ್ಣೋದ್ದಾರಗೊಂಡಿದೆ |
| ಭಾಷೆ | – | ಕನ್ನಡ, ತೆಲುಗು |
| ಉದ್ಯೋಗ | – | ಕೃಷಿ, ಕಲ್ಲಿನ ವ್ಯವಹಾರ |

ಇದು ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲೂಕಿಗೆ ಸೇರಿದ ಒಂದು ಗ್ರಾಮ ಇಂದು ಚಿಂಚೋಳಿಯಿಂದ 15 ಕಿ.ಮೀ ದೂರದಲ್ಲಿದೆ. ಆಂಧ್ರಪ್ರದೇಶಕ್ಕೆ ಕರ್ನಾಟಕದ ಕೊನೆಯ ಗಡಿಭಾಗ ಎಂದು ಹೇಳಬಹುದು. ಇಲ್ಲಿ ಜನರು ತೆಲುಗು ಹೆಚ್ಚಾಗಿ ಮಾತನಾಡುತ್ತಾರೆ ಕನ್ನಡ ಭಾಷೆ ಬಳಸುವುದು ಕಡಿಮೆ. ಇಲ್ಲಿನ ಜನರ ಕಸುಬು ಗಣಿಯಲ್ಲಿ ಕೆಲಸ ಮಾಡುವುದು ಇಲ್ಲಿ ಕಲ್ಲಿನ ಪರ್ಸಿಗಳು ತಯಾರಾಗುತ್ತವೆ. ಇಲ್ಲಿನ ಕಲ್ಲುಗಳು ಹಲವಾರು ಗ್ರಾಮ ಜಿಲ್ಲೆಗಳಿಗೆ ಸೇರುತ್ತವೆ. ಇಲ್ಲಿ ಗಂಡು ಹೆಣ್ಣು ಅಷ್ಟೇ ಸಮಾನರಾಗಿ ಕೆಲಸದಲ್ಲಿ ತೊಡಗುತ್ತಾರೆ. ಹಾಗೆ ಹಬ್ಬ ಹರಿದಿನಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸಮಾನರಾಗಿ ಭಾಗವಹಿಸುತ್ತಾರೆ.

ಈ ಊರಿನಲ್ಲಿ ಹೆಜ್ಜೆ ಹಾಕಿದೆಲ್ಲೆಡೆ ಕಲ್ಲಿನಿಂದ ಕೆತ್ತಲ್ಪಟ್ಟ ಶಿಲಾ ಕೃತಿಗಳು ಕಾಲಿಗೆ ತಾಕುವಂತಿದೆ. ಕಣ್ತೆರೆದು ನೋಡಿದರೆ ಕಲ್ಲಿನಿಂದ ನಿರ್ಮಿಸಿದ ಸುಂದರವಾದ ದೇವಾಲಯಗಳು ಇಲ್ಲಿ ನಾವು ಕಾಣಬಹುದು. ಪ್ರಾಚೀನ ಕಾಲದ ಈ ಸ್ಮಾರಕಗಳು ದೇವಾಲಯಗಳು ಇತಿಹಾಸಕ್ಕೆ ಮೂಕ ಸಾಕ್ಷಿಯಾಗಿವೆ. ಹಾಗೂ ಇಲ್ಲಿನ ಶಿಲಾ ಕೃತಿಗಳು ಸಂಶೋಧಕರನ್ನು ಕೈ ಮಾಡಿ ಕರೆಯುತ್ತಿವೆ. ಇವುಗಳನ್ನು ನೋಡಬೇಕಾದರೆ ನಾವೊಮ್ಮೆ ಮಿರಿಯಾಣ ಊರಿಗೆ ಹೋಗಬೇಕಾಗುತ್ತದೆ.

ಇತಿಹಾಸದ ವಿದ್ಯಾರ್ಥಿಗಳಿಗೆ ಮತ್ತು ಇತಿಹಾಸದಲ್ಲಿ ಸಂಶೋಧನೆಯನ್ನು ಕೈಗೊಳ್ಳುವವರಿಗೆ ಇಲ್ಲಿ ತಲೆ ತುಂಬ ಮತ್ತು ಕೈತುಂಬ ಕೆಲಸ ಸಿಗುತ್ತದೆ ಎಂದು ಹೇಳಬಹುದು. ಇಲ್ಲಿನ ಸ್ಮಾರಕ ದೇವಾಲಯ, ಶಿಲಾಕೃತಿಗಳು ಸಂಶೋಧಕರಿಗೆ ಒಂದು ಸುಂದರ ನೆಲೆ ಎಂಬುದು ಮೇಲ್ನೋಟಕ್ಕೆ ತಿಳದು ಬರುತ್ತದೆ.

ಈ ಗ್ರಾಮದಲ್ಲಿ ಐದು ಸುಂದರವಾದ ಕಲ್ಲಿನಿಂದ ಕೆತ್ತಿದ ನಿರ್ಮಿಸಿದ ಶಿವಲಿಂಗ ದೇವಾಲಯಗಳು ಇವೆ. ಇದರಲ್ಲಿ ಒಂದು ಈಶ್ವರಲಿಂಗ ಮತ್ತೊಂದು ಪಾಪನಾಶಲಿಂಗ ಹೆಚ್ಚು ಪ್ರಕಾಶಮಾನವಾಗಿದೆ. ಪಾಪನಾಶ ದೇವಾಲಯವು ಒಂದು ಸುಂದರ ದೇವಾಲಯವಾಗಿದ್ದು ಬಹಳ ಸುಂದರವಾಗಿ ನಿರ್ಮಾಣವನ್ನು ಮಾಡಿದ್ದಾರೆ. ಈ ದೇವಸ್ಥಾನಕ್ಕೆ ಹಲವಾರು ಜನರು ದರ್ಶನಕ್ಕೆ ಬರುತ್ತಾರೆ. ಊರಿನ ಜನರು ಸಾಯಂಕಾಲದ ವೇಳೆಗೆ ಈ ದೇವಸ್ಥಾನದ ಬಳಿ ತಂಪು ಇರುತ್ತದೆ ಎಂದು ಹಿರಿಯ ನಾಗರಿಕರು ಕೆರೆಯ ಕಟ್ಟೆಯಲ್ಲಿ ಕುಳಿತುಕೊಳ್ಳಲು ಬರುತ್ತಾರೆ. ದೇವಸ್ಥಾನದ ಮುಂದೆ ಒಂದು ಸುಂದರವಾದ ಕೆರೆಯಿದೆ. ಆ ಕೆರೆ ತುಂಬಾ

ನೀರು ತುಂಬಿಕೊಂಡಿವೆ. ಗುಡಿಯ ಮುಂಭಾಗ ಗಿಡ ಮರಗಳಿಂದ ಕೂಡಿದ್ದು, ತಂಪಾದ ಗಾಳಿ ಬೀಸುತ್ತದೆ.

ಪಾಪನಾಶ ದೇವಾಲಯವು ಊರ ಹೊರಗೆ ತಾಂಡೂರ ರಸ್ತೆಯಲ್ಲಿರುವ ಗುಡಿಯಾಗಿದೆ. ಗರ್ಭಗೃಹ, ತೆರೆದ ಅಂತರಾಳ ಹಾಗೂ ನವರಂಗಗಳನ್ನು ಹೊಂದಿದ್ದು, ಗುಡಿಗೆ ಪೂರ್ವದಿಂದ ಪ್ರವೇಶವಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು ನಾಲ್ಕು ಶಾಖೆಯ ಬಾಗಿಲವಾದವಿದೆ. ನವರಂಗದ ಚೌಕಾಕಾರದ ಕಂಬಗಳು ಕಿರಿದಾಗಿದ್ದು ಕೀರ್ತಿಮುಖ, ಹೂಬಳ್ಳಿ, ಮುತ್ತಿನ ಮಾಲೆ ಹಾಗೂ ಪದ್ಮಾಸಿನ ಯತಿಗಳ ಕೆತ್ತನೆಯನ್ನು ಹೊಂದಿದ್ದು, ಆಕರ್ಷಕವಾಗಿವೆ. ನವರಂಗದ ದೇವ ಕೋಷ್ಠಗಳಲ್ಲಿ ಸೂರ್ಯ ಹಾಗೂ ಗಣಪತಿಯ ಶಿಲ್ಪಗಳಿದ್ದು ಅಲ್ಲೇ ಮಹಿಷಮರ್ದಿನಿಯ ಶಿಲ್ಪವೂ ಇದೆ. ದೇವಾಲಯದ ಪ್ರಧಾನ ದ್ವಾರವು ಪಂಚಶಾಲಾಕೃತವಾಗಿದ್ದು ಸುಂದರವಾಗಿದೆ. ಈ ಗುಡಿಯ ಬಲಭಾಗಕ್ಕೆ ಇರುವ ಹನುಮಂತನ ಗುಡಿ ಮುಂದೆ ವೀರಗಲ್ಲು ಹಾಗೂ ಜಲದೇವತಾ ಶಿಲ್ಪಗಳಿವೆ. ಗರ್ಭಗೃಹದ ಮೇಲೆ ಕದಂಬ ನಾಗರ ಶಿಖರವಿದೆ. ಈ ) ದೇವಾಲಯವು ಸುಮಾರು 9–10ನೇ ಶತಮಾದ್ದಾಗಿರುವಂತೆ ತೋರುತ್ತದೆ" ೬



ಸ್ಥಳೀಯರ ವತಿಯಿಂದ ಪಕ್ಕದಲ್ಲಿ ಸಭಾಮಂಟಪ ನಿರ್ಮಾಣ ಮಾಡಿದ್ದಾರೆ. ಕಾರ್ಯಾಲಯವು ಇದೆ. ಹಾಗೂ ಊರಿನ ಜನರು ನವಗ್ರಹ ಮೂರ್ತಿಯನ್ನು ಅರಳಿ ಮರದ ಕೆಳಗೆ ನಿರ್ಮಾಣ ಮಾಡಿದ್ದಾರೆ. ಪ್ರತಿದಿನ ಪೂಜೆ ನಡೆಯುತ್ತದೆ. ಲಿಂಗಕ್ಕೆ ನಾಗರಡೆ ಹೆಡೆಯ ಹಿತ್ತಾಳೆಯಿಂದ ಮಾಡಿ ಕೂಡಿಸಿದ್ದಾರೆ.

### ೪.೭ ಸೋಮೆಶ್ವರ ದೇವಸ್ಥಾನ – ಚೇಂಗಟಾ :

ಊರು – ಚೇಂಗಟಾ
ದೇವಸ್ಥಾನದ ಹೆಸರು – ಸೋಮೆಶ್ವರ ದೇವಸ್ಥಾನ
ದೇವಸ್ಥಾನದ ಕಾಲಮಾನ– 11ನೇ ಶತಮಾನ
ರಾಜ ಮನೆತನ – ಕಲ್ಯಾಣ ಚಾಲುಕ್ಯ
ದೇವಸ್ಥಾನದ ಶೈಲಿ – ಕಪ್ಪು ಮಿಶ್ರಿತ ಬಿಳಿ ಛಾಯ ಕಲ್ಲು
ದೇವಸ್ಥಾನದ ದಿಕ್ಕು – ಉತ್ತರ ದಿಕ್ಕು
ದೇವಸ್ಥಾನದ ಸ್ಥಳ – ಊರ ಮಧ್ಯದಲ್ಲಿದೆ
ಪ್ರಸ್ತುತ ಮೇಲ್ವಿಚಾರಣೆ – ಸ್ಥಳಿಯರ ವತಿಯಿಂದ
ಪ್ರಸ್ತುತ ಸ್ಥಿತಿಗತಿ – ಜೀರ್ಣೋದ್ದಾರಗೊಂಡಿದೆ.

ಚಿಂಚೋಳಿ ತಾಲ್ಲೂಕು ಕೇಂದ್ರದಿಂದ 50 ಕಿ.ಮೀ ಅಂತರದಲ್ಲಿ ಚೇಂಗಟಾ ಚಾರಿತ್ರಿಕ ಗ್ರಾಮವಾಗಿದೆ. ಇಲ್ಲಿರುವ ಪ್ರಾಚೀನ ಸೋಮೇಶ್ವರ ದೇವಾಲಯದಿಂದ ಪ್ರಸಿದ್ಧಿ ಪಡೆದಿದೆ. ಇದು ಕಲ್ಯಾಣ ಚಾಲುಕ್ಯ ಅರಸರ ಕಾಲದಲ್ಲಿ ರಚನೆಯಾಗಿರಬಹುದು ಎಂದು ತಿಳಿದು ಬಂದಿದೆ. ಎತ್ತರವಾದ ಅಧಿಷ್ಠಾನದ ಮೇಲೆ ಪೂರ್ವಾಭಿಮುಖವಾಗಿ ನಿಂತಿರುವ ಗರ್ಭಗೃಹ ಹಾಗೂ ಅಂತರಾಳ ಭಾಗದ ಅವಶೇಷಗಳನ್ನು ಕಾಣಬಹುದಾಗಿದೆ. ಜೀರ್ಣೋವಸ್ಥೆಯಲ್ಲಿರುವ

ನವರಂಗ ಮಂಟಪ ಜೀರ್ಣೋದ್ಧಾರಗೊಂಡಿದೆ. ಬಹುಕೋನಾಕಾರದ ತಳವಿನ್ಯಾಸ ಹೊಂದಿದೆ. ಈ ದೇವಾಕಲಯದ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಇದರ ಬಾಗಿಲವಾಡವು ಚತುರ್ ಶಾಖಾಲಂಕೃತವಾಗಿದೆ. ಉತ್ತರಾಂಗದ ಪಂಚಕಿರು ಮಂಟಪಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ಹಾಗೂ ಆದಿತ್ಯ ಶಿಲ್ಪಗಳಿವೆ. ಅಂತರಾಳ ಬಾಗಿಲವಾಡವು ತುಂಬಾ ಆಕರ್ಷಕವಾಗಿದೆ. ದೇವಾಲಯದ ಇಕ್ಕೆಲಗಳಲ್ಲಿ ಮೂರುವರೆ ಅಡಿ ಎತ್ತರದ ದ್ವಾರಪಾಲಕರಿದ್ದಾರೆ. ತೊಲೆಯನ್ನು ಸುಂದರವಾದ ಮಕರ ತೋರಣದಿಂದ ಅಲಂಕರಿಸಲಾಗಿದೆ. ಗರ್ಭಗೃಹದ ಹೊರಭಿತ್ತಿಯಲ್ಲಿ ಮೂರು ದೇವಕೋಷ್ಟಕಗಳಿದ್ದು ಭೈರವ, ತ್ರಿಪುರಾಂತಕ ಶಿವ ಹಾಗೂ ಭೈರವಿಯರ ಶಿಲ್ಪಗಳಿವೆ. ಇಲ್ಲಿಯ ಮೂರ್ತಿ ಕೆತ್ತನೆ ತುಂಬಾ ಉತ್ಕೃಷ್ಟವಾಗಿದೆ. ದೇವಾಲಯದ ಮೂರುಕಡೆಗೆ ಮಹದ್ವಾರಗಳಿವೆ. ಸಿಂಹ, ನಟರಾಜ, ಅಂಧಕಾಸುರನ ಮೂರ್ತಿ ಹಾಗೂ ಶಿವನ ಲಾಂಛನವಿದೆ. ಗರ್ಭಗುಡಿಯ ಮಹದ್ವಾರದ ಮೇಲೆ ಗಣಪತಿಯ ಮೂರ್ತಿ ವಿರಾಜಮಾನವಾಗಿದೆ. ಈ ದೇವಾಲಯ ಊರಿನ ಉತ್ತರಭಾಗದಲ್ಲಿದ್ದು, ಬೃಹತ್ ದ್ವಾರಗಳಿಂದ ನಿರ್ಮಾಣವಾಗಿದೆ.

ಪ್ರತಿ ಅಮವಾಸ್ಯೆ ಮತ್ತು ಶುಭದಿನದಿಂದು ರುದ್ರಾಭಿಷೇಕ ಮಾಡುತ್ತಾರೆ. ಶ್ರಾವಣ ಮಾಸದಂದು ನಿರಂತರ ರುದ್ರಾಭಿಷೇಕ ಜರಗುತ್ತದೆ. ಸೋಮೇಶ್ವರ ದೇವಸ್ಥಾನದ ಜಾತ್ರೆಯು ಯುಗಾದಿ ಪಂಚಮಿಯಂದು ಜರಗುತ್ತದೆ. ಊರಲ್ಲಿರುವ ಪ್ರತಿಯೊಬ್ಬರು ಜಾತ್ರೆಗೆ ಹಾಜರಾಗುತ್ತಾರೆ. ಬದುಕಲು ಹೊರ ಹೊಗಿರುವ ಜನರೂ ಸಹ ಜಾತ್ರೆಯದಿನದಂದು ದೇವರ ದರ್ಶನ ಮಾಡಿಕೊಳ್ಳುತ್ತಾರೆ. ಇತನಿಗೆ ಹಲವಾರು ಹರಕೆಗಳು ಮಾಡಿದವರು ಈಡೇರಿಸುತ್ತಾರೆ ಜಾತ್ರೆಯ ದಿನದಂದು ಜಾತ್ರೆಯು ಬಹಳ ವಿಜೃಂಭಣೆಯಿಂದ ಜರುಗುತ್ತದೆ.

1998–99ನೇ ಸಾಲಿನಲ್ಲಿ ಸೋಮೇಶ್ವರ ದೇವಸ್ಥಾನದ ನವರಂಗವು ಸ್ಥಳಿಯರಿಂದ ಜೀರ್ಣೋದ್ಧಾರಗೊಂಡಿದೆ. ಅನೇಕ ಲೋಕಕಲ್ಯಾಣ ಮತ್ತು ವಿಶ್ವಶಾಂತಿ, ಧರ್ಮ ಜಾಗೃತಿಯ ಕಾರ್ಯಕ್ರಮಗಳು ಜರುಗಿ ಸರ್ವ–ಧರ್ಮ, ಸಮನ್ವಯತೆಯ ಸಾಂಸ್ಕೃತಿಕ ಕೇಂದ್ರವಾಗಿದೆ. ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳಿಂದ ಅನೇಕ ಭಕ್ತರು ಆಗಮಿಸಿ, ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಂಡು ಪರಮ ಪಾವನರಾಗುತ್ತಾರೆಂಬ ಪ್ರತಿಯಿದೆ”[೭]

**ಹರಕೆಯ ತತ್ವ :**

ಇಲ್ಲಿನ ಸೋಮೇಶ್ವರ ಲಿಂಗದ ಲೀಲೆ ಏನೆಂದರೆ ಭಕ್ತರು ನನಗಾದರೆ ನಾನು ನಿಮಗೆ ಎನ್ನುವುದು ಸೋಮೇಶ್ವರನ ತತ್ವ ನನ್ನನ್ನು ನೀವು ನೀರಿನಲ್ಲಿ ನಿಲ್ಲಿಸಿದರೆ ನಾನು ನಿಮಗೆ ನೀರಿನಲ್ಲಿ ನಿಲ್ಲಿಸುವೆ ಎಂಬ ಅಭಯ ಸೋಮೇಶ್ವರದ್ದಾಗಿದೆ ಎನ್ನುತ್ತಾರೆ. ದೇವಾಲಯದ ಪೂಜಾರಿ ಭೀಮರಾವರವರು.

ಮಳೆ ಬಾರದೆ ಬರಗಾಲ ಎದುರಾದಾಗ ಭಕ್ತರು ಸಾಮೂಹಿಕವಾಗಿ ಸೋಮೇಶ್ವರನಿಗೆ ಹರಕೆ ಹೊತ್ತು ವಿಶೇಷ ಪೂಜೆ ಹಾಗೂ ಮಡಿ–ಮೈಯಿಂದ ನೀರು ತುಂಬಿದ ಕೊಡವನ್ನು ಹೊತ್ತುಕೊಂಡು ಬಂದು ಗರ್ಭಗುಡಿಯಲ್ಲಿರುವ ಸೋಮೇಶ್ವರ ಲಿಂಗನಿಗೆ ಅರ್ಪಿಸಬೇಕು ಆ ನೀರಿನಲ್ಲಿ ಲಿಂಗವನ್ನು ಮುಳುಗುವಂತೆ ಮಾಡಬೇಕು ಲಿಂಗದ ಮೇಲೆ ಏರಿಸಿದ ಹೂವುಗಳು ಗರ್ಭಗುಡಿಯ ತುಂಬಾ ನೀರಿನಲ್ಲಿ ತೇಲಾಡಿದ ಸಂತೃಪ್ತನಾಗುವ ಸೋಮೇಶ್ವರ ಮಳೆ

ಸುರಿಯುವಂತೆ ಮಾಡುತ್ತಾರೆ ಎಂಬುವುದು ಇಲ್ಲಿನ ಭಕ್ತರ ನಂಬಿಕೆ. ಮಳೆ ಬಾರದಿದ್ದಾಗ ನಾವು ಮೇಲಿನಂತೆ ಹರಕೆ ಸಲ್ಲಿಸಿದರೆ ಹಲವು ಬಾರಿ ಮಳೆ ಸುರಿದಿದೆ ಎಂದು ಊರು ಜನರು ಹೇಳಿದ್ದಾರೆ. ಜನರ ಆ ನಂಬಿಕೆಯ ಸಹ ಗಾಢವಾಗಿದೆ.

**೪.೮ ಮಲ್ಲಿಕಾರ್ಜುನ ದೇವಸ್ಥಾನ – ಕುಪನೂರು:**

| | | |
|---|---|---|
| ಊರು | – | ಕುಪನೂರು ತಾ। ಚಿಂಚೋಳಿ ಜಿ। ಕಲಬುರಗಿ |
| ದೇವಸ್ಥಾನದ ಹೆಸರು | – | ಮಲ್ಲಿಕಾರ್ಜುನ ದೇವಸ್ಥಾನ |
| ದೇವಸ್ಥಾನದ ಕಾಲಮಾನ | – | 3ನೇ ಶತಮಾನ ಹಿಂದಿನದು (17ನೇ ಶತಮಾನ) |
| ದೇವಸ್ಥಾನದ ಶೈಲಿ | – | ಈಗಿನ ಕಲಾವಿದರದ್ದು |
| ದೇವಾಲಯದ ದಿಕ್ಕು | – | ಪೂರ್ವಾಭಿಮುಖ |
| ದೇವಾಲಯದ ಸ್ಥಳ | – | ಊರ ಮಧ್ಯ |
| ಪ್ರಸ್ತುತ ಸ್ಥಿತಿಗತಿ | – | ಜೀರ್ಣೋದ್ದಾರಗೊಂಡಿದೆ. |
| ಪ್ರಸ್ತುತ ಮೇಲ್ವಿಚಾರಣೆ | – | ಸ್ಥಳೀಯ ವತಿಯಿಂದ |

**ತಳ ವಿನ್ಯಾಸ :**

ಆಳವಾದ ಗರ್ಭಗ್ರಹ ಹೊಂದಿದೆ. ಎಲ್ಲಕ್ಕೂ ಅಂತರಾಳವಿದೆ. ಗರ್ಭಗ್ರಹದ ಬಾಗಿಲು ಚಿಕ್ಕದಾಗಿದ್ದು ವಿಶಾಲವಾದ ಮುಖ ಮಂಟಪ ಹೊಂದಿದೆ.

**ರಚನೆ :**

ಗುಲ್ಬರ್ಗಾ ಜಿಲ್ಲೆಯ ಚಿಂಚೋಳೀ ತಾಲ್ಲೂಕಿನಲ್ಲಿ ಕುಪನೂರ ಎಂಬ ಗ್ರಾಮವಿದೆ. ಇದು ಚಿಂಚೋಳಿಯಿಂದ 15 ಕಿ.ಮೀ. ದೂರವಿದ್ದು ಈ ಊರಲ್ಲಿ ಮಲ್ಲಿಕಾರ್ಜುನ ದೇವಸ್ಥಾನವು ಬಹಳ ಪ್ರತೀತಿ ಹೊಂದಿದೆ. ಯಾವುದೇ ಜಾತಿ ಜನಾಂಗಕ್ಕೆ ಸೀಮಿತವಾಗದೆ, ಬಡವ ಬಲ್ಲಿದ ಮೇಲು-ಕೀಳು, ಎಂಬ ತಾರತಮ್ಯವನ್ನು ಮಾಡದೆ ಎಲ್ಲರೂ ಸಮಾನವಾಗಿ ನಿಂತು ಪುಣ್ಯ ಕ್ಷೇತ್ರವಾದ ಮಲ್ಲಪ್ಪನ ಗುಡಿಗೆ ಬರುತ್ತಾರೆ. ಊರಲ್ಲಿ ಎಲ್ಲರೂ ಮಲ್ಲಪ್ಪ ಶ್ರೀಶೈಲ ಮಲ್ಲಪ್ಪನ ಗುಡಿ ಎಂದೆ ಕರೆಯುತ್ತಾರೆ.

ಭಾವೈಕ್ಯದ ಬೀಡು ಎಂತಲೂ ಸಹ ಕರೆಯುತ್ತಾರೆ ಈ ಊರಿನ ಗ್ರಾಮದಲ್ಲಿರುವ ಹಿಂದೂಗಳಾದ ಲಿಂಗಾಯತ, ಕುರುಬ, ಕಬ್ಬಲಿಗೆ ದಲಿತ ತಮ್ಮ ಜಾತಿ, ಧರ್ಮ ಮರೆತು ಮಾನವರಾಗಿ ಸಂಭ್ರಮದಿಂದ ಜಾತ್ರೆಯಲ್ಲಿ ಪಾಲ್ಗೊಂಡು ಭಾವೈಕ್ಯತೆ ಮರೆಯುತ್ತಾರೆ. ಸಾಂಸ್ಕೃತಿಕ ಕಾರ್ಯಕ್ರಮಗಳು ರಂಗೋಲಿ ಹಾಕುವುದು ಇಲ್ಲಿ ಒಂದು ಸಂಭ್ರಮದ ಹಬ್ಬವಾಗುತ್ತದೆ. ಮಲ್ಲಿಕಾರ್ಜುನ ದೇವರ ಜಾತ್ರೆಯ ದಿನದಂದು ಅಂದರೆ ಶಿವರಾತ್ರಿಯ ದಿನದಂದು ಈ ಊರಲ್ಲಿ ಜಾತ್ರೆಯನ್ನು ಮಾಡುತ್ತಾರೆ. ಜಾತ್ರೆಯಲ್ಲಿ ಎಲ್ಲರೂ ಪಾಲ್ಗೊಳ್ಳುತ್ತಾರೆ ಊರಲ್ಲಿ ಯಾರೂ ಸಹ ಅಂದು ಮನೆಯಲ್ಲಿ ಇರುವುದಿಲ್ಲ ಎಲ್ಲರೂ ಅಂದಿನ ದಿವಸ ತಮ್ಮ ಕೆಲಸವನ್ನು ಬಿಟ್ಟು ಜಾತ್ರೆಯಲ್ಲಿ ವಿಜೃಂಭಣೆಯಿಂದ ಜಾತ್ರೆಯನ್ನು ಮಾಡುತ್ತಾರೆ.

ಇಲ್ಲಿ ಪ್ರತಿದಿನ ದೇವರ ಪೂಜೆ ಮಾಡುತ್ತಾರೆ ಹಾಗೆಯೇ ಊರಲ್ಲಿ ತಮಗೆ ಕಷ್ಟ ಎಂದು ಬಂದಾಗ ಈ ದೇವರಲ್ಲಿ ಹರಕೆಯನ್ನು ಹೊತ್ತುತ್ತಾರೆ ಅವರ ಹರಕೆ ತೀರಿದ ನಂತರ

ಅವರು ಆತನಿಗೆ ಬೇಡಿಕೊಂಡ ಹರಕೆಯನ್ನು ಮುಟ್ಟಿಸುತ್ತಾರೆ. ಈ ದೇವಸ್ಥಾನದಲ್ಲಿ ವಿವಾಹ ಸಹ ನಡೆಯುತ್ತದೆ. ಶ್ರಾವಣಮಾಸದಲ್ಲಿ ಪ್ರತಿ ದಿವಸ ಎರಡು ಸರಿ ಪೂಜೆ ಮಾಡುತ್ತಾರೆ. ಮತ್ತು ಅಭಿಷೇಕವು ಪ್ರತಿನಿತ್ಯ ನಡೆಯುತ್ತದೆ ಉಳಿದಂತೆ ಜನರು ಅವರ ಇಚ್ಛೆಯ ಮೇರೆಗೆ ಪೂಜೆಯನ್ನು ಸಲ್ಲಿಸುತ್ತಾರೆ.

ಗ್ರಾಮದಲ್ಲಿ ಜಾತ್ರೆ ಮುಗಿಯುವವರೆಗೆ ಜೋಳದ ಕಬ್ಬು ಜೋಳದ ಸೀತನಿ ತಿನ್ನುವಂತಿಲ್ಲ. ಗ್ರಾಮದಲ್ಲಿ ಹಿಂದೂ ಮುಸ್ಲಿಂ ಧರ್ಮದವರು ಮದುವೆ ಮಾಡುವಂತಿಲ್ಲ. ಜತೆಗೆ ತಾಲ್ಲೂಕಿನ ವ್ಯವಹಾರಿಕ ಪಟ್ಟಣ ಸುಲೆಪೇಟರ ವ್ಯಾಪಾರಸ್ಥರು ತಮ್ಮ ಅಂಗಡಿ ಮುಂಗಟು ಮುಚ್ಚಿ ತಪ್ಪದೇ ಜಾತ್ರೆಗೆ ಆಗಮಿಸುವುದರಿಂದ ಜಾತ್ರೆಯ ದಿನ ಸುಲೇಪೇಟ ಬಜಾರ ಬಂದ್ ಆಗಿರುತ್ತದೆ ಎಂದು ಊರ ಜನರು ತಿಳಿಸಿದರು.

ಸರ್ವಧರ್ಮದ ಜನರು ಕೂಡಿ ನಡೆಸುವ ಮಲ್ಲಿಕಾರ್ಜುನ ಜಾತ್ರಾ ಮಹೋತ್ಸವಕ್ಕೆ ಹಲವು ದಶಕಗಳ ಇತಿಹಾಸವಿದೆ ಎಂದು ಪೂಜಾರಿಯವುರ ಹೇಳಿದರು. ಶಾಸನ, ಸ್ಮಾರಕ, ಪುರಾತನ, ವಿಶಿಷ್ಟ ಸಂಸ್ಕೃತಿಯಿಂದ ಧಾರ್ಮಿಕ ಕ್ಷೇತ್ರದಲ್ಲಿ ಗುರುತಿಸಲ್ಪಡುವ ಕುಪನೂರ ಗ್ರಾಮದಲ್ಲಿ ಜಾತ್ರೆಯದಿನ ಸಡಗರ ಸಂಭ್ರಮದಿಂದ ಹಬ್ಬದ ವಾತಾವರಣ ಸೃಷ್ಟಿ ಮಾಡುತ್ತದೆ.

ಜಾತ್ರೆಯ ದಿನದಂದು ಜೋಳದ ಸೀತನಿಯ ತೆನೆ ದೇವರಿಗೆ ಅರ್ಪಿಸುವ ಸಂಪ್ರದಾಯ ಇಲ್ಲಿದೆ. ಹಾಗಾಗಿ ಊರ ಜನರು ಸೀತನಿಯ ತೆನೆಯನ್ನು ತಿನ್ನುವುದಿಲ್ಲ ಸುಡುವುದಿಲ್ಲ. ಮೂರು ಶತಮಾನಗಳ ಇತಿಹಾಸ ಹೊಂದಿದ ದೇವಾಲಯದಲ್ಲಿ ಉದ್ಭವ ಲಿಂಗವಿದೆ. ಆರು ಕಂಬದ ನವರಂಗವನ್ನು ಹೊಂದಿದೆ. ಒಳಗೆ ಗರ್ಭಗ್ರಹದಲ್ಲಿ ಲೋಹದ ಸುಂದರವಾದ ಲಿಂಗವಿದೆ. ಲಿಂಗದ ಮುಂದೆ ಮೂರು ತ್ರಿಶೂಲಗಳನ್ನು ಇಟ್ಟಿದ್ದಾರೆ. ಅದರ ಬಗ್ಗೆ ಏನು ಮಾಹಿತಿ ಸಿಕ್ಕಿಲ್ಲ. ಗರ್ಭಗೃಹದ ಮೇಲಿನ ಭಾಗ ಷಟ್ಪದಿಯ ಆಕಾರದಲ್ಲಿ ಉದ್ದನೆಯ ಕಲ್ಲಿನಿಂದ ನಿರ್ಮಿಸಿದ್ದಾರೆ ಈ ಲಿಂಗವು ಒಡಲು ಶ್ರೀಶೈಲ ಮಲ್ಲಿಕಾರ್ಜುನ ಲಿಂಗದಂತೆ ಹೋಲುತ್ತದೆ ಹಾಗಾಗಿ ಈ ಲಿಂಗಕ್ಕೆ ಮಲ್ಲಿಕಾರ್ಜುನ ದೇವಸ್ಥಾನ ಎಂದು ಕರೆಯುತ್ತಾರೆ.

ಶ್ರೀಶೈಲ ಮಲ್ಲಿಕಾರ್ಜುನನೆಯ ದಿವ್ಯವಾಣಿ, ವ್ಯಾಪಾರಿಯ ಭಕ್ತಿಸೇವೆ ಸಂಪತ್‌ವೃದ್ಧಿ, ನಂಬಿದ ಭಕ್ತರನ್ನು ಉದ್ಧರಿಸಿದ ಕೀರ್ತಿ ಮಲ್ಲಿಕಾರ್ಜುನದಾಗಿದೆ.

ಗ್ರಾಮದಲ್ಲಿ ದನಕರುಗಳಿಗೆ ಹಾವು ಕಡಿದರೆ ಆ ದನಕರುಗಳನ್ನು ದೇವಾಲಯಕ್ಕೆ ಕರೆ ತಂದು ಐದು ಸುತ್ತು ಹಾಕಿದಾಗ ಹಾವು ಕಡಿದ ಹಸುಗಳು ಬದುಕುಳಿಯುತ್ತೇವೆ ಎಂದು ಊರ ಹಿರಿಯ ಪ್ರಮುಖ ಶಿವರಾಜಪ್ಪ ಪಾಟೀಲ ಹೇಳಿದ್ದಾರೆ. ಈ ಪದ್ಧತಿಯ ಈಗಲೂ ಸಹ ನಡೆಯುತ್ತಿದೆ ಎಂದೂ ಸಹ ಹೇಳಿದರು.

ಜಾತ್ರೆಯ ಮುನ್ನಾ ದಿನವೇ ಗ್ರಾಮದ ಜನರೆಲ್ಲರೂ ಗರ್ಭ-ಗೃಹದಲ್ಲಿರುವ ಮಲ್ಲಿಕಾರ್ಜುನನಿಗೆ ಸುರಿಗಿ ಸುತ್ತಿ ಎಣ್ಣೆ ಹಚ್ಚಿ ನೀರು ಹಾಕಿ ಮದುವೆಗೆ ಸಿಂಗರಿಸುತ್ತಾರಂತೆ ಮುರುದಿನ ಪಲ್ಲಕಿಯಲ್ಲಿ ಆತನನ್ನು ಕೂಡಿಸಿ ಮುತ್ತೈದೆಯರಿಂದ ಆರತಿ, ನಂದಿಕೋಲು, ಡೊಳ್ಳು, ಭಜನೆಯೊಂದಿಗೆ ಮೆರವಣಿಗೆಯಲ್ಲಿ ದೇವಾಲಯಕ್ಕೆ ಕರೆತಂದು, ನಂತರ ದೇವಾಲಯವನ್ನು ಐದು ಸುತ್ತು ಹಾಕುತ್ತಾರಂತೆ.]

ಪಲ್ಲಕಿಯು ಊರ ತುಂಬಾ ಮೆರವಣಿಗೆ ಮಾಡುತ್ತಾರೆ ಊರೊಳಗೆ ಹೋಗುವಾಗ ಊರಲ್ಲಿನ ಜನರು ಪಲ್ಲಕಿಗೆ ಹೂ ಹಣ್ಣು, ಕಾಯಿ ಕರ್ಪೂರದಿಂದ ಪೂಜೆಯನ್ನು ಮಾಡಿ ನಮಸ್ಕರಿಸುತ್ತಾರೆ ಹಾಗೆಯೇ ಪಲ್ಲಕ್ಕಿ ಹೊತ್ತುಕೊಂಡು ಬರುವ ನಾಲ್ಕು ಜನರಿಗೆ ಕೆಂಪು ಟಾವೆಲ್ ಬಿಳಿ ಟೊಪ್ಪಿಗೆ ಹಾಕುತ್ತಾರೆ ಪಲ್ಲಕ್ಕಿ ಹೊತ್ತಿರುವವರಿಗೆ ಊರಲ್ಲಿರುವ ಜನರು ಒಂದು ಕೊಡ ಒಂದು ತೆಂಬಿಗೆ ನೀರು ಹಾಕಿ ಪಲ್ಲಕಿಗೆ ನಮಸ್ಕಾರ ಮಾಡುತ್ತಾರೆ. ಪಲ್ಲಕಿಯು ಊರಲ್ಲಿ ಮೆರವಣಿಗೆಯು ವಿಜೃಂಭಣೆಯಿಂದ ಕೂಡಿರುತ್ತದೆ. ಜನರ ಕುಣಿತ ಹಾಡುಗಳಿಂದ ಪುನಃ ದೇವಸ್ಥಾನದ ಬಳಿ ತರುತ್ತಾರೆ. ದೇವಸ್ಥಾನದ ಬಳಿ ತಂದು ನಿಲ್ಲಿಸಿದಾಗ ಊರ ಜನರು ತಮ್ಮ ತಮ್ಮ ಹೊಲಕ್ಕೆ ಹೋಗಿ ಜೋಳದ ಸಿತನೆಯ ತೆನೆಯನ್ನು ಪಲ್ಲಕಿಯ ಮೇಲೆ ಹಾಕಿ ಮಲ್ಲಿಕಾರ್ಜುನನಿಗೆ ಅಕ್ಷತೆ ಹಾಕಿದಷ್ಟು ಸಂತೋಷಪಡುತ್ತಾರೆ. ಮಲ್ಲಿಕಾರ್ಜುನನ ಮದುವೆ ಮಾಡಿಸುತ್ತಾರೆ.

ಮಾರನೇ ದಿನ ದೇವರನ್ನು ಪುನಃ ಗದ್ದುಗೆಯ ಒಯ್ದು ಕೂಡಿಸುತ್ತಾರೆ. ಗರ್ಭಗೃಹದ ಒಳಗಿರುವ ಲಿಂಗಕ್ಕೆ ಮೇಲೆ ಕಂಚಿನ ರೂಪನ ಒಂದು ತಲೆಯ ನಾಗರ ಮೂರ್ತಿಯನ್ನು ಮಾಡಿ ಹಾಕ್ತಿದ್ದಾರೆ ಇದು ಪ್ರತಿದಿನವು ಹಾಕುವುದಿಲ್ಲ ಶ್ರಾವಣ ಮಾಸದಲ್ಲಿ ಒಂದು ತಿಂಗಳು ಮತ್ತು ಅವತ್ತಿನ ದಿನ ಅಭಿಷೇಕ ಮಾಡಿದ ದಿನ ಮತ್ತೆ ಜಾತ್ರೆಯಂದು ಹಾಕಿ ಅಲಂಕರಿಸುತ್ತಾರೆ.

**೪.೯ ಹನುಮಂತನ ದೇವಸ್ಥಾನದ ಚರಿತ್ರೆ – ಹಾಳೂರು :**

| | | |
|---|---|---|
| ಗ್ರಾಮದ ಹೆಸರು | – | ಹಾಳೂರು ತಾ ಚಿಂಚೋಳಿ ಜಿ॥ ಗುಲಬರ್ಗಾ |
| ದೇವಸ್ಥಾನದ ಹೆಸರು | – | ಹಾಳೂರಿನ ಒಡೆಯ ಹನುಮಾನ |
| ಮೊದಲಿನ ಹೆಸರು | – | ಎತೆಬಾರಪುರ |
| ದೇವಸ್ಥಾನದ ನಿರ್ಮಾಣ | – | ಮರದ ಕೆಳಗೆ (ಗುಡಿಯು ಕಟ್ಟಿಲ್ಲ) |
| ದೇವಸ್ಥಾನ ಇರುವುದು | – | ಕಾಡಿನಲಿ (ಊರ ಸಮೀಪ ಇರುವುದು) |
| ದೇವಸ್ಥಾನದ ದಿಕ್ಕು | – | ಉತ್ತರಾಭಿಮುಖ |

**ರಚನೆ :**

ಎತ್ತ ನೋಡಿದರು ಕಾಣುವ ಹಸಿರು ಸಿರಿಯ ನಡುವೆ ಅನಾಥವಾಗಿದೆ ಈ ಹಾಳೂರಿನ ಆಂಜನೇಯನ ಮೂರ್ತಿ ಇತಿಹಾಸದ ಹಲವು ಕೌತುಕಗಳನ್ನು ಈ ಊರು ಒಡಲೊಳಗ ಇರಿಸಿಕೊಂಡಿದ್ದು, ಅವುಗಳ ನೈಜ ಸಂಗತಿ ಇಂದು ಬೆಳಕಿಗೆ ಬರಬೇಕಾಗಿದೆ. ಆದರೆ ಸರಕಾರದ ಮುಜುರಾಯಿ ಇಲಾಖೆಯವರು ಹಳೆಯ ಸ್ಮಾರಕ ಮತ್ತು ದೇವಸ್ಥಾನಗಳ ಬಗ್ಗೆ ಹೆಚ್ಚಿನ ಗಮನ ವಹಿಸುತ್ತಿಲ್ಲ. ಈ ಊರು ಇರುವುದು ಚಿಂಚೋಳಿ ತಾಲೂಕಿನಿಂದ 20 ಕಿ.ಮೀ. ದೂರದಲ್ಲಿರುವ ಸಾಲೇಬೀರನಹಳ್ಳಿಯಿಂದ ಸಲಗರ ಬಸಂತಪುರಕ್ಕೆ ಹೋಗುವ ರಸ್ತೆಗೆ ಭಿಕ್ಷುನಾಯಕ ತಾಂಡದ ಬಳಿ ಉತ್ತರ ದಿಕ್ಕಿಗೆ ಎರಡು ಕಿ.ಮೀ ದೂರ ಸಾಗಿದರೆ ಈ ಎರೆಬಾರವುದು (ಹಾಳೂರ) ಬರುತ್ತದೆ. ಇಲ್ಲಿ ಜನರಿಗೆ ಹೋಗಲು ಬಸ್ಸಿನ ಸೌಕರ್ಯ

ಇರುವುದಿಲ್ಲ. ಯಾವುದಾದರೂ ಊರಿಗೆ ಹೋಗಲು ಈ ಊರಿನ ಜನರು ಕಾಲು ನಡಿಗೆಯಿಂದ 2 ಕಿ.ಮೀ ದೂರಕ್ಕೆ ನಡೆದುಕೊಂಡು ಹೋಗಿ ನಂತರ ಆಟೋ ಅಥವಾ ಬಸ್ಸಿನ ಮೂಲಕ ಪ್ರಯಾಣ ಬೆಳೆಸಿಕೊಳ್ಳುತ್ತಾರೆ. ಈ ಊರಲ್ಲಿ ಎಲ್ಲಿಯೇ ಹೆಜ್ಜೆ ಇಟ್ಟರೂ ಮನೆಯ ಗೋಡೆಯ ಬುನಾದಿ ಕಲ್ಲುಗಳು ಕಾಲಿಗೆ ಬಡಿಯುತ್ತವೆ. ಸಾವಿರಾರು ವರ್ಷ ಜನತೆಗೆ ಆಶ್ರಯ ನೀಡಿದ ನಮಗೆ ಯಾರು ಕೇಳುವರೆ ಇಲ್ಲ ಎಂದಾಗುತ್ತದೆ ಎಂದು ಅಲ್ಲಿನ ಕಲ್ಲುಗಳು ಮೌನವಾಗಿ ರೋದಿಸುತ್ತವೆ. ಈ ಹಾಳೂರಿನ ರೋದನ ನಿಜಕ್ಕೂ ಅರಣ್ಯ ರೋದನವಾಗಿದೆ ಎಂದು ಹೇಳಬಹುದು.

ಇಲ್ಲಿ ಹೋಗಿ ನೋಡಿದಾಗ ಸೂರು, ಕೆರೆ, ಕಟ್ಟೆ, ಬಾವಿ ಹಾಗೂ ದೇವಾಲಯ ಮತ್ತು ವಿಶಿಷ್ಟ ಕಲ್ಲಿನ ಮೂರ್ತಿಗಳು ಹಾಗೂ ಶಿಲಾಶಾಸನ ಒಡಲೊಳಗೆ ಹುದುಗಿಸಿಕೊಂಡ ಎತೆಬಾರಪುರ ಗ್ರಾಮ ಚರಿತ್ರೆಯಿಂದ ತೆರೆಮರೆಗೆ ಸರಿದಿದೆ. ಹಾಗೆಯೇ ಇಲ್ಲಿನ ಶಿಲ್ಪಗಳು ತಮ್ಮ ಅಸ್ತಿತ್ವದ ಕುರಿತು ಮೌನವಾಗಿ ನಿವೇದಿಸುತ್ತಿರುವಂತೆ ಗೋಚರಿಸುತ್ತವೆ. 20 ರಿಂದ 30 ಎಕರೆ ವಿಸ್ತಾರದ ಈ ಹಾಳೂರಿನಲ್ಲಿ 500 ಮನೆಗಳು ಕಾಲಚಕ್ರಕ್ಕೆ ಸಿಲುಕಿ ಅವಸಾನ ಕಂಡಿವೆ ಎಂದು ಅಲ್ಲಿರುವ ಜನರು ಹೇಳಿದರು. ಅರಣ್ಯದಲ್ಲಿ ದೇವಸ್ಥಾನದ ಬಳಿ ಹೋದಾಗ ಗ್ರಾಮದೇವತೆ ಮತ್ತು ಲಕ್ಷ್ಮಿದೇವಿಯ ಎರಡು ದೇವಸ್ಥಾನಗಳು ಕಂಡವು ಮಂದಿರದ ಮುಂದೆ ಪರ್ಷಿಯನ್ (ಕಾಲದ) ಭಾಷೆಯ ಒಂದು ಶಾಸನ ಕಂಡು ಬಂದಿದೆ. ಈ ಶಾಸನವು ಯಾವುದೇ ರಕ್ಷಣೆಯಿಲ್ಲದೆ ಇಲ್ಲಿ ಅನಾಥವಾಗಿ ಇದ್ದಿದ್ದು ಕಂಡು ಬರುತ್ತದೆ.

ಹನುಮಾನ ಮೂರ್ತಿ, ರಾಮಲಕ್ಷ್ಮಣರ ಪಾದುಕೆ ಅದರ ಮೂಲೆ ಸೂರ್ಯ ಚಂದ್ರನ ಮೂರ್ತಿ ಕೆತ್ತನೆಗಳಿದ್ದದ್ದು ಕಂಡು ಬಂದಿವೆ. ಇಲ್ಲಿ ಒಂದು ವೀರಗಲ್ಲು ಸಹ ಇದೆ. ಇನ್ನೊಂದೆಡೆ ಬೆತ್ತಲೆಯ ಸ್ತ್ರೀಯ ಮೂರ್ತಿಯು ಕಂಡು ಬಂದಿದೆ. ಆ ಮೂರ್ತಿಯ ಬಗ್ಗೆ ಕೇಳಿದಾಗ ಊರ ಜನರು ಅದು ಜಾಣೆಯ ಮೂರ್ತಿ ಇದೆ ಎಂದು ಹೇಳಿದರು. ಹಾಗೆಂದರೆ ಏನು ಎಂದು ಕೇಳಿದಾಗ ಊರಲ್ಲಿ ಊರ ದೇವತೆಯ ಜಾತ್ರೆಯನ್ನು ಪ್ರತಿ ವರ್ಷ ಸಂಕ್ರಾಂತಿಯ ಹಬ್ಬವನ್ನು ಮುಗಿದ ನಂತರ ಮಾಡುತ್ತಿದ್ದೇವೆ ವರ್ಷ ವರ್ಷಕ್ಕೂ ಜಾತ್ರೆಯ ಚೆನ್ನಾಗಿ ನಡೆಯುತ್ತಿತ್ತು ಒಂದು ಬಾರಿ ಜಾತ್ರೆಯನ್ನು ನಡೆಯುವಾಗ ಊರಲ್ಲಿ ಅಶುಭ ನಡೆದಿದ್ದರಿಂದ ದೇವಿಯ ಪೂಜೆ ಮಾಡುವ ಜಾಣೆಯು ನಿಂತಲ್ಲಿ ಜೀವಹಾನಿ ಆಗಿತ್ತಂತೆ ಅದನ್ನು ಹಾಗೆಯೇ ಆ ದೇವತೆಯ ಗುಡಿಯ ಮುಂದೆಯೇ ನಿಲ್ಲಿಸಿ ಬಿಟ್ಟಿದ್ದಾರಂತೆ.

ಗ್ರಾಮದೇವತೆ ಪಕ್ಕದಲ್ಲಿ ಹನುಮಾನ ಮೂರ್ತಿಯಿದೆ. ಈ ಊರು ಹಿಂದಿಜನ ಕಾಲದಲ್ಲಿ ಶ್ರೀಮಂತ ಗ್ರಾಮವಿತ್ತು. ಇಲ್ಲಿ ಪಗಡೆ ಹೆಚ್ಚಾಗಿ ಆಡುತ್ತಿದ್ದರು ಎಂಬ ಮಾಹಿತಿ ತಿಳಿದು ಬಂದಿದೆ. ಇಲ್ಲಿನ ಪಗಡೆ ಬಜಾರ್ ನೋಡಿಯೇ ಹೈದ್ರಾಬಾದ ನಿಜಾಮನು ಸುಲೇಪೇಟದಲ್ಲಿ ಪಗಡೆ ಬಜಾರ್ ನಿರ್ಮಿಸಿದ ಎಂಬ ಮಾಹಿತಿ ಇದೆ.

ಈಗಲೂ ಸಹ ಸುಲೇಪೇಟ ಗ್ರಾಮವು ತಾಲ್ಲೂಕು ಕೇಂದ್ರವಾದ ಚಿಂಚೋಳಿಗಿಂತ ಹೆಚ್ಚು ವ್ಯಾಪಾರ ವಹಿವಾಟು ನಡಸುವ ವ್ಯವಹಾರಿಕ ಪಟ್ಟಣವಾಗಿದೆ. ಹಲವು ಶತಮಾನ ಹಿಂದೆ ಎತೆಬಾರಪುರ ಗ್ರಾಮವು ಸಹ ಇಂದಿನ ಸುಲೇಪೇಟದಂತೆಯೇ ವ್ಯಾಪಾರಿ ಕೇಂದ್ರವಾಗಿತ್ತು ಎನ್ನಬಹುದು. ಇಲ್ಲಿ ಪ್ರತಿ ವರ್ಷ ಇಂದಿಗೂ ಸಹ ಎಳ್ಳಮಾಸೆ ಮುಗಿದು

ಸಂಕ್ರಾಂತಿ ಹಬ್ಬದ ಮುಂದೆ ಜಾತ್ರೆಯನ್ನು ಮಾಡುತ್ತಾರೆ 20 ಸಾವಿರಕ್ಕೂ ಹೆಚ್ಚು ಜನ ಇಲ್ಲಿ ಜಾತ್ರೆಯ ದಿನದಂದು ಸೇರುತ್ತಾರೆ. ಹಾಗೆ ಮೂರು ವರ್ಷಕ್ಕೊಮ್ಮೆ ಗ್ರಾಮದೇವತೆಯ ಜಾತ್ರೆ ಸಹ ಮಾಡುತ್ತಾರೆ. ಈ ಉತ್ಸವಕ್ಕೆ ಬಂದ ಜನರು ಇಲ್ಲಿನ ಜಾಣಿಮೂರ್ತಿಗೆ ಅಂದರೆ ಹನುಮಾನ ಪಕ್ಕದಲ್ಲಿರುವ ಮೂರ್ತಿಗೆ ಕಲ್ಲು ಹೊಡೆಯುತ್ತಾರಂತೆ ಯಾಕೆ ಎಂದು ಕೇಳಿರದೆ ಇದು ಇಲ್ಲಿ ನಡೆದುಕೊಂಡು ಬಂದ ರೂಢಿಯಾಗಿದೆ ಎಂದು ಹೇಳಿದರು. ಇದರ ಬಗ್ಗೆ ನಮಗೆ ಹೆಚ್ಚಿನ ಮಾಹಿತಿ ಸಿಕ್ಕಿಲ್ಲ. ಹಲವಾರು ಜನರಿಗೆ ವಿಚಾರಿಸಿದರೂ ಸಹ ಯಾರು ಸಹ ಮಾಹಿತಿ ನೀಡಿಲ್ಲ.

ಈ ಗ್ರಾಮವು ಮುಸ್ಲಿಂರ ದಾಳಿಯಿಂದ ಅವಸಾನ ಹೊಂದಿರುವ ಶಂಕೆಯಿಂದ ಎಂಬ ಮಾಹಿತಿ ಸಂಗ್ರಹಿಸಲಾಗಿದೆ. ಇದಕ್ಕೆ ಸಾಕ್ಷಿಯಾಗಿ ಸಿಕ್ಕಿದ್ದು ಹನುಮಾನ ಮೂರ್ತಿಯ ಮುಂದೆ ನಂದಿ ಮೂರ್ತಿ ಗೋಚರಿಸುತ್ತದೆ. ಎಂದು ಸಂಶೋಧಕಿಯಾದ ಶ್ಯಾಮಲಾ ಅವರು ಅಭಿಪ್ರಾಯ ಪಡುತ್ತಾರೆ. ಈ ಹನುಮಾನ ದೇವರ ಮೂರ್ತಿಗೆ ಪ್ರತಿಯೊಬ್ಬರು ನಮಸ್ಕರಿಸುತ್ತಾರೆ ತಮಗೆ ಬೇಕಾದ ಕೋರಿಕೆಗಳನ್ನು ಬೇಡಿಕೊಳ್ಳುತ್ತಾರೆ ಅತಿ ಹೆಚ್ಚಾಗಿ ಗಂಡು ಮಕ್ಕಳಿಗೆ ಪ್ರಿಯಕರನಾದವನು ಹನುಮಾನ ದಏವರು ಎಂದು ಹೇಳಬಹುದು. ಹಾಗಾಗಿ ಇಲ್ಲಿರುವ ಹನುಮಾನ ಮೂರ್ತಿಯು ಊರವರ ಆರಾಧ್ಯದೈವ, ಆಪ್ತರಕ್ಷಕನಾಗಿದ್ದನೆಂಬುದು ಎಂದು ತಿಳಿಯಬಹುದು.

**೪.೧೦ ಬಕ್ಕಪ್ರಭು ದೇವಸ್ಥಾನ – ಗೊಟ್ಟಂಗೊಟ್ಟಿ :**

| | | |
|---|---|---|
| ಗ್ರಾಮ | – | ಗೊಟ್ಟಂಗೊಟ್ಟಿ |
| ದೇವಸ್ಥಾನದ ಹೆಸರು | – | ಬಕ್ಕಪ್ರಭು ದೇವಾಲಯ |
| ದೇವಸ್ಥಾನದ ಕಾಲಮಾನ | – | 18ನೇ ಶತಮಾನ |
| ಗರ್ಭಗೃಹದ ದಿಕ್ಕು | – | ಪೂರ್ವಾಭಿಮುಖವಾಗಿದೆ. |
| ದೇವಸ್ಥಾನದ ನಿರ್ಮಾಣ | – | 19ನೇ ಶತಮಾನ |
| ಪ್ರಸ್ತುತ ಸ್ಥಿತಿಗತಿ | – | ಜೀರ್ಣೋದ್ದಾರವಾಗಿದೆ. |
| ಪ್ರಸ್ತುತ ಮೇಲ್ವಿಚಾರಣೆ | – | ಸ್ಥಳಿಯರವತಿಯಿಂದ |
| ಭಾಷೆ | – | ಕನ್ನಡ–ತೆಲುಗು |

**ರಚನೆ :**

ಗೊಟ್ಟಂಗೊಟ್ಟಿ ಎಂದಾಕ್ಷಣ ಅದೊಂದು ರಮಣೀಯವಾದ ಪ್ರವಾಸಿ ತಾಣ ಸಮುದ್ರ ಮಟ್ಟದಿಂದ 547 ಮೀಟರ ಎತ್ತರದಲ್ಲಿರುವ ಅತ್ಯಾಕರ್ಷಕ ಪ್ರದೇಶ ಇದಾಗಿದೆ. ಎತ್ತರದ ಗುಡ್ಡದ ಮೇಲೆ ನಿಂತು ನೋಡಿದರೆ ಎತ್ತಿ ಪೋತ ಜಲಪಾತದಿದ ನದಿ ಮೂಲಕ ಹರಿದು ಬರುವ ನೀರು ಹಾಗೂ ಜಲಾಶಯದ ಹಿನ್ನೀರು ಮತ್ತು ಸೂರ್ಯಸ್ತದ ದೃಶ್ಯಗಳನ್ನು ನೋಡುವುದು ಒಂದು ಸುಂದರ ಸೊಬಗು0 ಎಂತಲೇ ಹೇಳಬಹುದು. ಈ ದೃಶ್ಯಗಳು ನೋಡಲು ಎರಡು ಕಣ್ಣು ಸಾಲದು ಎಂದು ಹೇಳಬಹುದು.

ಇದು ಚಿಂಚೋಳಿಯಿಂದ 22 ಕಿ.ಮೀ. ದೂರದಲ್ಲಿರುವ ಒಂದು ಚಿಕ್ಕ ಗ್ರಾಮವಾಗಿದೆ. ಈ ಗ್ರಾಮದಿಂದ 3 ಕಿ.ಮೀ ದೂರದಲ್ಲಿ ಶ್ರೀ ಬಕ್ಕಪ್ರಭುಗಳು ದೇವಸ್ಥಾನವಿದೆ. ಇಲ್ಲಿ ಹೋಗಲು ಬಸ್ಸಿನ ಅನುಕೂಲ ಇಲ್ಲವೇ ಇಲ್ಲ ಕಾಲುದಾರಿಯಿಂದ ಮತ್ತು ಎತ್ತಿನ ಬಂಡೆ ಬೈಕ್ ಆಟೋ ತೆಗೆದುಕೊಂಡು ಹೋಗ ಬೇಕಾಗುತ್ತದೆ.

ಈ ದೇವಸ್ಥಾಣ ಅರಣ್ಯ ಪ್ರದೇಶದಲ್ಲಿದೆ. ಇಲ್ಲಿ ಪೂಜಾರಿ, ಕಸ ಗುಡಿಸುವವರು ಮಾತ್ರ ಪ್ರತಿನಿತ್ಯ ಇರುತ್ತಾರೆ. ಇಲ್ಲಿ ಹಲವಾರು ಪ್ರಾಣಿ ಪಕ್ಷಿಗಳು ವಾಸವಾಗಿದ್ದಾವೆ.

ಈ ದೇವಸ್ಥಾನವು 19ನೇ ಶತಮಾನದಲ್ಲಿ ನಿರ್ಮಾಣವಾಗಿದ್ದರಿಂದ ಸುಟ್ಟ ಇಟ್ಟಿಗೆಗಳಿಂದ ಗರ್ಭಗೃಹ ಮಾತ್ರ ನಿರ್ಮಾಣವಾಗಿತ್ತು ಸುತ್ತ ಮುತ್ತಲು ಸುಂದರವಾದಲ ವಾತಾವರಣ ಹೊಂದಿದೆ. ಇಂದು ಗರ್ಭಗೃಹದ ಮುಂದೆ 16 ಕಂಬದ ಛತ್ತನ್ನು ಹಾಕಿ ಇನ್ನು ಸ್ವಲ್ಪ ಅಗಲವಾಗಿ ಗುಡಿಯನ್ನು ನಿರ್ಮಾಣ ಮಾಡಿದ್ದಾರೆ. ಗುಡಿಯ ಪಕ್ಕದಲ್ಲಿ ಪೂಜಾರಿಯರ ನಿವಾಸ ದನ ಕರುಗಳು ಕಟ್ಟಲು ಸ್ವಲ್ಪ ಕೊಟ್ಟಿಗೆ ನಿರ್ಮಾಣ ಮಾಡ್ತಿದ್ದಾರೆ. ಈ ಅರಣ್ಯ ಪ್ರದೇಶದಲ್ಲಿ ಶ್ರಾವಣ ಮಾಸದಂದು ಜನ ಹೆಚ್ಚಾಗಿ ಕಾಣ ಸಿಗುತ್ತಾರೆ. ಹಾಗೂ ಪ್ರತಿದಿನ ಇಲ್ಲಿ ಅಭಿಷೇಕ ಮತ್ತು ರುದ್ರಾಭಿಷೇಕ ಮಾಡುತ್ತಾರೆ.

ಗೌರಿ ಹುಣ್ಣಿಮೆಯಂದು ಗೊಟ್ಟಂಗೊಟ್ಟಿಯಲ್ಲಿ ಪವಾಡ ಪುರುಷರಾದ ಗಂಗಾಧರ ಬಕ್ಕಪ್ರಭುಗಳ ಜಾತ್ರೆ ನಡೆಯುತ್ತದೆ. ಅಂದು ಆಂಧ್ರಪ್ರದೇಶ, ಕರ್ನಾಟಕ ಹಾಗೂ ಮಹಾರಾಷ್ಟ್ರದ ಸಾವಿರಾರು ಭಕ್ತರು ಪ್ರಭುಗಳ ಗದ್ದುಗೆಗೆ ಹಣೆ ಹಚ್ಚಿ ನಮಸ್ಕರಿಸಿ ತೇರು ಎಳೆದು ಪ್ರಸಾದ ಸ್ವೀಕರಿಸಿ ಹೋಗುತ್ತಾರೆ.

ಅಂದಿನ ದಿನ ಜನರು ಮನೆಯಿಂದ ಪ್ರಸಾದವನ್ನು ಮಾಡಿಕೊಂಡು ಬಂದು ದೊಡ್ಡ ದೊಡ್ಡ ಮರಗಳ ಕೆಳಗೆ ತಂದಿರುವ ಬುತ್ತಿಯನ್ನು ಬಿಚ್ಚಿ ದೇವರಿಗೆ ನೈವಿದ್ಯ ತೋರಿಸಿ ನಂತರ ತಾವು ಸೇವಿಸಿ ಮರುದಿನ ಬೆಳಿಗ್ಗೆ ದೇವರ ದರ್ಶನ ಮಾಡಿ ಹಿಂತಿರುಗುತ್ತಾರೆ.

ಅಂದು ಕಾರ್ತಿಕ ಮಾಸ ಇರುವುದರಿಂದ ಬಹು ಬೇಗ ಕತ್ತಲೆ ಆವರಿಸಿಕೊಳ್ಳುತ್ತದೆ ಹೀಗಾಗಿ ದೇವಾಲಯದ ಸುತ್ತ-ಮುತ್ತ ಒಂದು ಕಿಲೋಮೀಟರ್‌ವರೆಗೆ ಜನ ಮರದ ಕೆಳಗೆ ಆಶ್ರಯ ಪಡೆಯುವುದರಿಂದ ಸಲುವಾಗಿ ಎಲ್ಲ ಕಡೆಗೆ (ವಿದ್ಯುತ್) ವ್ಯವಸ್ಥೆ ಕಲ್ಪಿಸಲಾಗುತ್ತದೆ. ಪಾಂಡವರು ವ್ಯವಸಾಯಕ್ಕಾಗಿ ಬಂದಾಗ ಇಲ್ಲಿ ಆಶ್ರಯ ಪಡೆದಿದ್ದರು ಎಂಬ ಮಾಹಿತಿ ಇದೆ. ಆಗ ಇಲ್ಲಿ ದೊರೆಯುವ ಪಾಂಡವರ ಪುಂಡಿಪಲ್ಯೆ ಎಂಬ ಬಿಳಿಯ ತಪ್ಪಲು ಬಳಸಿ ಸಾರು ತಯಾರಿಸಿ ಸೇವಿಸುತ್ತಿದ್ದರಂತೆ ಎಂಬ ಪ್ರತೀತಿ ಇದೆ. ಈ ವಿಷಯವು ಜನರ ನಾಲಿಗೆಯ ಮೇಲೆ ಹರಿದಾಡುತ್ತಿದೆ. ಹಾಗೆಯೇ ಇಲ್ಲಿ ಪಾಂಡವರು ನಡೆದಾಡಿರುವ ಕಲ್ಲಿನ ಮೇಲೆ ಹೆಜ್ಜೆಯ ಗುರುತುಗಳು ಸಹ ಇವೆಯಂತೆ ಈಗ ಅವು ನಮಗೆ ದೊರೆಯುವಂತಿಲ್ಲ ಕಾರಣ ಕಾಡಿನಲ್ಲಿ ಅವು ಮುಚ್ಚಿ ಹೋಗಿವೆ.

ಪಾಂಡವರು ಈ ಪುಣ್ಯಸ್ಥಳದಲ್ಲಿ ನೆಲೆಸಿರುವುದರಿಂದ ಇಲ್ಲಿ ಬಕ್ಕ ಪ್ರಭುಗಳು ತಪಸ್ಸು ಮಾಡಿ ಈ ಒಂದು ಪುಣ್ಯ ಸ್ಥಳವನ್ನು ಮಹತ್ವದ ಐತಿಹಾಸಿಕ ಸ್ಥಳವಾಗಿ ನಿರ್ಮಾಣ ಮಾಡಿದ್ದಾರೆ. ಇವರು ತಪಸ್ಸು ಮಾಡಿದ ನಂತರ ಪಾಂಡವರು ಈ ಪುಣ್ಯಸ್ಥಳದಲ್ಲಿ ನೆಲೆಸಿರುವುದರಿಂದ ಇಲ್ಲಿ ಬಕ್ಕ ಪ್ರಭುಗಳು ತಪಸ್ಸು ಮಾಡಿ ಈ ಒಂದು ಪುಣ್ಯಸ್ಥಳವನ್ನು

ಮಹತ್ವದ ಐತಿಹಾಸಿಕ ಸ್ಥಳವಾಗಿ ನಿರ್ಮಾಣ ಮಾಡಿದ್ದಾರೆ. ಇವರು ತಪಸ್ಸು ಮುಗಿದ ನಂತರ ಅಲ್ಲಿಯೇ ಸಮಿಪವಿರುವ ಕರಕನಳ್ಳಿ ಎಂಬ ಗ್ರಾಮವಿದೆ ಅಲ್ಲಿ ಹೋಗಿ ಕೆಲವು ಕಾಲವು ತಪಸ್ಸು ಮಾಡಿ ಲಿಂಗೈಕ್ಯರಾದರಂತೆ ಕರಕಳ್ಳಿಯು ಸಹ ಒಂದು ದೊಡ್ಡ ಊರಾಗಿ ಬೆಳೆದು ಬಿಟ್ಟಿದೆ ಇಲ್ಲಿ ಬಕ್ಕಪ್ರಭುಗಳ ದೇವಸ್ಥಾನ ನಿರ್ಮಾಣವಾಗಿದೆ.

ಈ ಗೊಟಂಗ್ಬಗೊಟ್ಟದಲ್ಲಿ ಶ್ರಾವಣಮಾಸದಂದು ಬಕ್ಕಪ್ರಭುಗಳ ಗದ್ದುಗೆಗೆ ಬಹಳ ವೈಭವದಿಂದ ಪೂಜೆಯನ್ನು ಮಾಡುತ್ತಾರೆ ಹಲವಾರು ಭಕ್ತಾದಿಗಳು ಸಾಲು ಸಾಲಾಗಿ ಬರುತ್ತಾರೆ ಕಾಯಿ ಕರ್ಪೂರವನ್ನು ಮಾಡಿ ಪ್ರಸಾದವನ್ನು ಸ್ವೀಕರಿಸಿ ಮರಳಿ ಹೋಗುತ್ತಾರೆ.

ಹಸಿರು ವನರಾಶಿಯಾಗಿ ಹೃದಯದಲ್ಲಿ ಅಡಗಿಸಿಕೊಂಡಿರುವ ರಮಣೀಯ ತಾಣದಲ್ಲಿ ಹಲವು ಸುತ್ತಿನ ಕೋಟೆ, ಪ್ರಾಚೀನ ಸ್ಮಾರಕಗಳ ಐತಿಹ್ಯ ಮತ್ತು ಅಪರೂಪದ ವೀರಗಲ್ಲುಗಳು ಮುರಿದು ಬಿದ್ದಿರುವುದು, ನೋಡಿರುವುದು ಇದೊಂದು ಚಿತ್ರಕಾರರಿಗೆ ಸಂಶೋಧನೆಗೆ ಸೂಕ್ತವಾದ ನೆಲೆಯ ಬೀಡಾಗಿದೆ ಎಂದು ಜಗನ್ನಾಥ ಶೀರಿಕಾರ ಈ ದೇವರ ಚರಿತ್ರೆ ಏನೆಂದರೆ ಈತ ಎಲ್ಲಿನವನು ಮತ್ತು ಏಕೆ ಇಲ್ಲಿಗೆ ಬಂದನು ಎನ್ನುವುದನ್ನು ತಿಳಿದುಕೊಳ್ಳೋಣ. 18ನೇ ಶತಮಾನದಲ್ಲಿ ಬಾಳಿ ಬದುಕಿದ ಇತನು ಆಂಧ್ರಪ್ರದೇಶದ ಸದಾಶಿವ ಪೇಟೆಯ ಆತ್ಮಕೂರಿನ ಭೋಜಪ್ಪ ಮತ್ತು ಭೋಗಮ್ಮ ಎಂಬ ದಂಪತಿಯ ಮಗನಾಗಿ ಜನಿಸಿದವನು. ಇವರು ಬೆಲ್ಲದ ಹೇರು (ಎತ್ತಿನ ಬಂಡೆಯ ಮೇಲೆ ಬೆಲ್ಲದ ಮೂಟೆಗಳನ್ನು ಊರಿಂದ ಊರಿಗೆ ಸಾಗಿಸುವುದು) ಹೊಡೆಯುವ ಕಾಯಕ ಮೂಡುತ್ತಿದ್ದರಂತೆ ಇತನ ತಂದೆ ತಾಯಿಗಳು ಸುಂದರವಾದ ಸಂಸಾರ ಇತ್ತು. ಬಕ್ಕಪ್ರಭುಗಳು ದಾರಿಯಲ್ಲಿ ಹೋಗುವಾಗ ಗೊಟ್ಟಂಗೊಟ್ಟಿ ಎಂಬ ಊರಲ್ಲಿ ವಿಶ್ರಾಂತಿ ಪಡೆದರು. ಒಂದು ದಿನ ಕಾಂಟ್ಲಿಯ ಮೇಲೆ (ಬಂಡೆ) ಕಾಂಟ್ಲಿಯು ಅದೃಶ್ಯವಾಯಿತು. (ಮಾಯವಾಯಿತು). ಎಲ್ಲಿ ಹೋಯಿತು ಏನು ಎಂದು ಹುಡುಕಾಡಿದರು. ಆದರೆ ಸಿಗಲಿಲ್ಲ. ಪ್ರಭುಗಳು ಇದೆ ವಿಷಯಕ್ಕೆ ವೈರಾಗ್ಯಕ್ಕೆ ಕಾರಣವಾಯಿತು ಎಂದು ಅಲ್ಲಿರುವ ಪೂಜಾರಿ ವಿಷಯ ತಿಳಿಸಿದನು. ಆಗ 12ನ ವರ್ಷ ಅವರು ತಪಸ್ಸು ಮಾಡಿದರು. ಎತ್ತರದ ಗುಡ್ಡದ ಮೇಲೆ ಗಂಗೆಯನ್ನು ತರಿಸಿ ಗಂಗಾಧರನಾಗಿ ಭಕ್ತರಿಗೆ ಬ್ರಹ್ಮೋಪದೇಶ ಮಾಡಿದ ಶ್ರೀಗಳ ಪವಾಡ ಶಕ್ತಿಗೆ ಸಾಕ್ಷಿಯಾದ ಸಿದ್ದಗುಂಡವು ಇಂದಿಗೂ ಸಹ ಒಂದು ದಿವಸನು ಬತ್ತು ಹೋಗಿಲ್ಲ ಎಂತಹ ಬಿರಿ ಬಿಸಿಲಿನಲ್ಲೂ ಸಹ ಬತ್ತುವುದಿಲ್ಲ ಎನ್ನುತ್ತಾ ಅಲ್ಲಿರುವ ಮಳಿವಾಳಯ್ಯ ಸ್ವಾಮಿ.

ಸುಂದರ ಪರ್ವತದಂತೆ ಗೋಚರಿಸುವ ಗೊಟ್ಟಂಗೊಟ್ಟ ಇತಿಹಾಸ ಪೂರ್ವ ಕಾಲದ ಮಹತ್ವಕ್ಕೆ ತಾಣವಾಗಿದೆ. ಈಗಿನ ಗೊಟ್ಟಗೊಟ್ಟವು ಅಂದಿನ ಕಾಲದ ವಿರಾಟ ನಗರವಾಗಿತ್ತು ಎಂದು ಹೇಳಬಹುದು.

ಪ್ರಜಾವಾಣಿ ರಿಪೋರ್ಟರ್ ಆಗಿರುವ ಇವರು ಇದರ ಬಗ್ಗೆ ಕೆಲವು ಮಾಹಿತಿ ನೀಡದರು.

ಐತಿಹಾಸಿಕ ಪೂರ್ವದಲ್ಲಿ ಕಾಲಕ್ಕೆ ಸೇರಿದ ಜಂಬಟ್ಟಿಗೆಗಳಿಂದ ನಿರ್ಮಿಸಿದ ಕೋಟೆಯ ಗೋಡೆಯ ಅಳಿದುಳಿದ ಬುನಾದಿ ಮತ್ತು ಕೋಟೆ ಪ್ರವೇಶದಲ್ಲಿ ಹಲವು ದ್ವಾರಗಳು ಹಾಗೂ ಯುದ್ಧದಲ್ಲಿ ಎದುರಾಳಿಯೊಂದಿಗೆ ಹೊರಾಡುತ್ತಿರುವ ಸ್ತ್ರೀ-ಪುರುಷರ ವೀರಗಲ್ಲುಗಳು ಗಮನ

ಸೆಳೆಯುತ್ತವೆ. ಇಲ್ಲಿ ಐದು ಸಾವಿರ ಹಿಂದಿನ ಸಮಾಧಿಗಳು ಸಂಶೋಧಕರು ಪತ್ತೆ ಹಚ್ಚಿದ್ದಾರೆ. ಇತಿಹಾಸದ ಪೂರ್ವಕಾಲ ಮತ್ತು ಆದಿ ಶಿಲಾಯುಗ ಹಾಗೂ ನವ ಶಿಲಾಯುಗದಲ್ಲಿ ಗೊಟ್ಟಂಗೊಟ್ಟ ಜನವಸತಿಯ ತಾಣವಾಗಿತ್ತು. ಆಗ ಇದೊಂದು ಬೌದ್ಧಧರ್ಮದ ನೆಲೆಯಾಗಿತ್ತು. ಇಲ್ಲಿ ಬೌದ್ಧದ ವಜ್ರಯಾನ ಪಂಥದ ಸಾಧಕರು ನೆಲೆಸಿದ್ದರು ಎನ್ನುತ್ತಾರೆ ಸಾಹಿತಿಯದ ಡಾ॥ ಶ್ರೀಶೈಲ ನಾಗರಾಳ ಅವರು. ಆಂಧ್ರದ ನಾಗಾರ್ಜುನ ಕೊಂಡದಿಂದ ಸನ್ನತಿ, ಮಿರಿಯಾಣ, ಗೊಟ್ಟಂಗೊಟ್ಟ ಮಾರ್ಗವಾಗಿ ಗೋದಾವರಿ ನದಿಯವರೆಗೆ ಹೆದ್ದಾರಿಯೊಂದು ಆ ಕಾಲದಲ್ಲಿ ಅಸ್ತಿತ್ವದಲ್ಲಿತ್ತು ಎಂದು ಹೇಳಲಾಗುತ್ತಿದ್ದರು. ಇಂದು ಈ ಗೊಟ್ಟಂಗೊಟ್ಟ ಬಕ್ಕ ಪ್ರಭುಗಳು ದೇವಸ್ಥಾನವಾಗಿರುವುದರಿಂದ ಸುತ್ತಲಿರುವ ಹಳ್ಳಿಗಳಿಗೆ ಒಂದು ಪ್ರವಾಸಿ ತಾಣವಾಗಿದೆ. ಡಿಸೆಂಬರ್ ತಿಂಗಳಲ್ಲಿ ಊರಿನ ಶಾಲೆಯ ಮಕ್ಕಳಿಗೆ ಒಂದು ದಿವಸದ ಪ್ರವಾಸಕ್ಕೆ ಈ ಸ್ಥಳವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಶಾಲೆಯ ಮಕ್ಕಳು ಆನಂದದಿಂದ ಇಲ್ಲಿಗೆ ಬಂದು ಸ್ಥಳದಲ್ಲಿ ಸುತ್ತಾಡಿ ತಂದಿರುವ ಬುತ್ತಿಯನ್ನು ಬಿಚ್ಚಿಕೊಂಡು ಊಟವನ್ನು ಮಾಡಿ ಆಡಿ ಆನಂದಿಸಿ ಕುಣಿದು ಕುಪ್ಪಳಿಸಿ ಸಾಯಂಕಾಲದ ವೇಳೆ ಮನೆಗೆ ಹೋಗುತ್ತಾರೆ.

### ೪.೧೧ ಕೊರವಂಜೇಶ್ವರಿ ಬಾವಿಯ ಚರಿತ್ರೆ – ಕೊರವಿ:

ಇದು ಚಿಂಚೋಳಿ ತಾಲ್ಲೂಕಿನ ಒಂದು ಚಿಕ್ಕ ಗ್ರಾಮವಾಗಿದೆ. ೩೨ ಕಿ.ಮೀ ದೂರದಲ್ಲಿರುವ ಈ ಊರು ಕೊರವಂಜಿಯ ಬಾವಿಯಿಂದ ಒಂದು ಐತಿಹಾಸಿಕ ಸ್ಥಳವಾಗಿದೆ.

ಇದು ಬರೀ ಬಾವಿಯಲ್ಲ! ಕೊರವಂಜೇಶ್ವರಿ ದೇವಿಯ ರೂಪದಲ್ಲಿ ಗಂಗೆ ಇಲ್ಲಿ ನೆಲೆ ನಿಂತಿ ಪವಾಡಗಳ ಮೂಲಕ ಭಕ್ತರನ್ನು ಉದ್ದರಿಸುವ ಪವಿತ್ರ ತೀರ್ಥ ಕ್ಷೇತ್ರವಾಗಿದೆ.

ಈ ಬಾವಿಯಲ್ಲಿ ದಿನಕ್ಕೆ ಮೂರು ಬಾರಿ ಬಣ್ಣ ಬದಲಾಯಿಸುತ್ತವೆ ಈ ನೀರು. ಈ ಬಾವಿಯಲ್ಲಿ ತಾಮ್ರ ಮತ್ತು ಮಣ್ಣಿನ ಕೊಡಗಳು ತಳದಿಂದ ತೇಲಿ ಬರುವ ದೃಶ್ಯಗಳು ನಾವು ಇಂದಿಗೂ ಸಹ ನೋಡಬಹುದು. ಈ ಬಾವಿಯಲ್ಲಿ ಎಂತಹ ಬಿರು ಬೇಸಗೆಯಲ್ಲಿಯೂ, ಸಹ ನೀರು ಬತ್ತದಿರುವುದು ತಿಳಿದು ಬಂದಿದೆ. ಇದೆಲ್ಲಾ ಕೊರವಂಜೇಶ್ವರಿ ದೇವಿಯ ಮಹಿಮೆ ಎನ್ನುತ್ತಾರೆ ಊರ ಜನರು.

ಖಿಲಾರಿ ಭೂಕಂಪದ ಮುನ್ಸೂಚನೆಯನ್ನು ಈ ಬಾವಿಯಲ್ಲಿ ತೇಲುವ ಕೊಡ ಸೂಚಿಸುತ್ತದೆಯಂತೆ ಇದನ್ನು ಕಣ್ಣಾರೆ ಕಂಡ ಕೊರವಿ ಗ್ರಾಮಸ್ಥರು ಹೇಳಿದ್ದಾರೆ. ಅವರು ಈ ದೇವಿಯನ್ನು ಹೆಚ್ಚಾಗಿ ನಂಬುತ್ತಾರೆ. ಭೂಕಂಪದ ಮುನ್ಸೂಚನೆಯ ಎಂದು ಹೇಗೆ ನೀವು ತಿಳಿದು ಕೊಂಡಿದ್ದೀರಾ ಎಂದು ಕೇಳಿದಾಗ ಕೊಡವು ಬಾವಿಯಲ್ಲಿ ಬಾಯಿ ಮೇಲೆ ಮಾಡಿಕೊಂಡು ಕಂಡಿರುವುದು ಈಗಾಗಲೇ ಅದು ಮೂರು ಬಾರಿ ನಮಗೆ ಕಂಡಿದೆ ಆದರೆ ಅದರ ಬಗ್ಗೆ ನಮಗೆ ಗೊತ್ತಾಗಿಲ್ಲ ನಂತರ ತಿಳಿದುಕೊಂಡಾಗ ತಿಳಿಯಿತು. ಮತ್ತೊಮ್ಮೆ ಕಂಡವರು ಇದನ್ನು ಭೂಕಂಪದ ಮುನ್ಸೂಚನೆ ಎಂದೇ ಭಾವಿಸಿದ್ದಾರೆ.

ಅವರ ಇಡಿ ಕುಟುಂಬ ಆರ್ಥಿಕವಾಗಿ ಸದೃಢವಾಗುತ್ತದೆ ಎಂಬುವುದು ಅಲ್ಲಿನವರ ನಂಬಿಕೆ.

ದಾವದ ಹುಣ್ಣಿಮೆಯ ದಿನವು ಈಕೆಯ ಜಾತ್ರೆಯ ಮಾಡುತ್ತಾರೆ. ಈ ಜಾತ್ರೆಯು ಐದು ದಿನಗಳ ಕಾಲ ನಡೆಯುತ್ತದೆ ಎಂದು ಹೇಳಿದರು ಐದು ದಿನಗಳ ಕಾಲ ಜಾತ್ರೆಯು ಬಹುವಿಜೃಂಭಣೆಯಿಂದ ಆಚರಣೆ ಮಾಡುತ್ತಾರಂತೆ ಒಂದೊಂದು ದಿನ ಕೊರವಂಜೆಶ್ವರಿಗೆ (ದೇವಿಯ ವಾಹನಗಳಾದ ಕುದುರೆ, ನವಿಲು, ಆನೆ, ಸಿಂಹ, ಹುಲಿ, ಹೂವುಗಳ ಮೇಲೆ ಆಕೆಯನ್ನು ಕುಡಿಸಿ ಊರಿನೊಳಗೆ ಪ್ರದಕ್ಷಿಣೆ (ಮೆರವಣಿಗೆ) ಹಾಕುತ್ತಾರೆ ಪುನಃ ಮತ್ತೆ ಬಾವಿಯಲ್ಲಿ ತಂದು ಹಾಕಿ ಕೂಡಿಸುತ್ತಾರಂತೆ. ಜಾತ್ರೆಯ ದಿನದಂದು ಹಲವಾರು ಊರ ಜಿಲ್ಲೆಗಳಿಂದ ಭಕ್ತಾದಿಗಳು ಬಂದು ಆಗಮಿಸಿ ಆಕೆಯ ದರ್ಶನವನ್ನು ತೆಗೆದುಕೊಂಡು ಹೋಗುತ್ತಾರೆ.

ಜಾತ್ರೆಗೆ ಬರುವ ಭಕ್ತಾದಿಗಳಿಗೆ ಬಸ್ಸಿನ ಸೌಲಭ್ಯ ತುಂಬಾ ಗುಲಬರ್ಗಾದಿಂದ ೬೬ ಕಿ.ಮೀ ದೂರವಾಗುತ್ತದೆ. ಅಲ್ಲಿಂದ ನೇರವಾಗಿ ಊರಲ್ಲಿ ಬರುವ ಹಾಗೆ ಸಾರಿಗೆ ಸೌಕರ್ಯ ಮಾಡಲಾಗಿದೆ. ಚಿಂಚೋಳಿಯಿಂದ ೩೦ ಕಿ.ಮೀ ದೂರವಾಗುತ್ತದೆ ಇಲ್ಲಿಂದ ಸಹ ಸಾರಿಗೆ ಸೌಕರ್ಯ ಕಲ್ಪಿಸಲಾಗಿದೆ.

ಊರಿನ ಜನರು ಜಾತ್ರೆಯ ದಿನದಂದು ಮನೆಯನ್ನು ತೊಳೆದು ಹೂವಿನಿಂದ ಅಲಂಕಾರಗೊಳಿಸಿ ಹೊಸ ಹೊಸ ಬಟ್ಟೆಗಳನ್ನು ಧರಿಸಿ ದೇವಿಯ ಗುಡಿಗೆ ಆಗಮಿಸುತ್ತಾರೆ ದೇವಿಯ ಪ್ರದಕ್ಷಿಣೆಯ ವೇಳೆಗೆ ಎಲ್ಲರೂ ಸಮವಾಗಿ ಭಾಗವಹಿಸಿ ಸಂತೋಷಪಡುತ್ತಾರೆ.

ಕೊರವಂಜಿ ದೇವಿಗೆ ಗುಡಿಯು ಕಟ್ಟಿಸಿಲ್ಲ ಈಕೆಯು ಇನ್ನು ಭಾವಿಯಲ್ಲಿಯೇ ಕುಳಿತುಕೊಂಡಿದ್ದಾಳೆ. ಅಲ್ಲಿಯೇ ಮೆಟ್ಟಲಿನ ಮೂಲಕ ಪ್ರವೇಶಿಸಿ ಆಕೆಯ ಹತ್ತಿರ ಹೋಗಿ ಕಾಯಿ ಕರ್ಪೂರ, ಹೂ, ಹಣ್ಣು ನೈವೇದ್ಯ ಮಾಡಿ ಅವರ ಕೋರಿಕೆ ಕೋರುತ್ತಾರೆ.

### ೪.೧೨ ಸೋಮೇಶ್ವರ ಲಿಂಗನ ಚರಿತ್ರೆ – ಸೋಮಲಿಂಗದಹಳ್ಳಿ:

ಊರು – ಸೋಮಲಿಂಗದಹಳ್ಳಿ
ದೇವಸ್ಥಾನದ ಹೆಸರು – ಸೋಮೇಶ್ವರ ದೇವಸ್ಥಾನ
ದೇವಸ್ಥಾನ ಇರುವ ಸ್ಥಳ – ಊರಿನ ಕೊನೆಯ ಭಾಗದಲ್ಲಿ
ದೇವಸ್ಥಾನ ಕಾಲಮಾನ – ೧೦-೧೧ನೇ ಶತಮಾನ
ಅರಸು ಮನೆತನ – ಕಲ್ಯಾಣಿ ಚಾಲುಕ್ಯರು
ಭಾಷೆ – ಕನ್ನಡ, ತೆಲುಗು
ಪ್ರಸ್ತುತ ದೇವಸ್ಥಾನ ಸ್ಥಿತಿಗತಿ – ಜೀರ್ಣೋದ್ಧಾರಗೊಂಡಿದೆ.
ಪ್ರಸ್ತುತ ಮೇಲ್ವಿಚಾರಣೆ – ಸ್ಥಳಿಯ ವತಿಯಿಂದ
ದೇವಸ್ಥಾನದ ದಿಕ್ಕು – ಪೂರ್ವಾಭಿಮುಖವಾಗಿದೆ.

**ರಚನೆ :**

ಚಿಂಚೋಳಿ ತಾಲ್ಲೂಕಿನ ಸೋಮಲಿಂಗದಹಳ್ಳಿಯ ಒಂದು ಚಿಕ್ಕ ಗ್ರಾಮವಿದೆ. ಸರಿ ಸುಮಾರು 2 ರಿಂದ 3 ಸಾವಿರ ಜನರು ಇಲ್ಲಿ ವಾಸ ಮಾಡುತ್ತಾರೆ. ಕೃಷಿ ಅವಲಂಬಿತು ಜನರು ಇಲ್ಲಿ ಹೆಚ್ಚು. ಜನರಲ್ಲಿ ಒಗ್ಗಟ್ಟು ಇದೆ. ಊರಿನ ಯಾವುದೇ ಸಮಾರಂಭಗಳಲ್ಲಿ ಒಟ್ಟಾಗಿ

ಸೇರಿ ಕಾರ್ಯಕ್ರಮಗಳು ಮಡಿ ಮುಗಿಸುತ್ತಾರೆ. ಇಂತಹ ಊರಿನಲ್ಲಿ ಒಂದು ಸುಂದರವಾದ ದೇವಸ್ಥಾನ ಇರುವುದು ಅದು ಸೋಮಲಿಂಗನ ಸೋಮೇಶ್ವರ ದೇವಸ್ಥಾನ ಈ ದೇವಸ್ಥಾನವು ಕಲ್ಯಾಣಿ ಚಾಲುಕ್ಯರಿಂದಲೂ ಇದೆಯೆಂದು ಈ ದೇವಸ್ಥಾನದ ಪೂಜಾರಿಯು ಶಿವಲಿಂಗಯ್ಯ ಸ್ವಾಮಿ ಹೇಳಿದ್ದಾರೆ. ಯಾವ ಆಧಾರದ ಮೇಲೆ ನೀವು ಕಲ್ಯಾಣಿ ಚಾಲುಕ್ಯರ ಕಾಲದ್ದು ಎಂದು ಹೇಳುತ್ತಿರಿ ಎಂದು ಕೇಳಿದಾಗ ಇದೆ ಊರಲ್ಲಿ ವೀರಗಲ್ಲು ಮಸ್ತಿಗಲ್ಲುಗಳು ಅನೇಕ ಇವೆ ಇಂದು ಅವು ಅನಾಥವಾಗಿ ಬಿದ್ದಿವೆ. ಅದರ ಬಗ್ಗೆ ಸರ್ಕಾರಕ್ಕೆ ನಾವು ಸೂಚನೆ ನೀಡಿದ್ದೇವೆ ಇದುವರೆಗೂ ಯಾರೊಬ್ಬರು ಕೇಳಲು ಬಂದಿಲ್ಲ. ಪ್ರತಿ ದಿನವು ಭಕ್ತಾದಿಗಳು ಬರುತ್ತಾರೆ ಹೋಗುತ್ತಾರೆ ಎಂದು ಸಹ ಊರ ಗ್ರಾಮಸ್ಥರು ತಿಳಿಸಿದರು. ಕೊರವಂಜೇಶ್ವರಿಯು ಬಹಳ ಮಹಿಮೆ ಉಳ್ಳ ಗ್ರಾಮ ದೇವತೆಯಾಗಿ ಕೊರವಿ ಎಂಬ ಗ್ರಾಮದಲ್ಲಿ ನೆಲೆಸಿ ಬಿಟ್ಟಿದ್ದಾಳೆ ಎಂದು ಹೇಳಿದರು. ಸೋಮೇಶ್ವರ ಲಿಂಗವು ಉದ್ಭವ ಮೂರ್ತಿಯು ಆಗಿದೆ. ಇದನ್ನು ಇಲ್ಲಿ ಯಾರು ಪ್ರತಿಷ್ಟಾಪಿಸಿಲ್ಲ ಗರ್ಭಗ್ರಹದಲ್ಲಿ ಜೊಡು ಲಿಂಗವಿದೆ ಒಂದು ಕರಿಕಲ್ಲಿನಿಂದ ಕೂಡಿದೆ. ಇನ್ನೊಂದು ಕಪ್ಪುಲೋಹದಿಂದ ಕೂಡಿದೆ ಎಂದು ಹೇಳಿದರು ಈ ಎರಡು ಲಿಂಗದ ಪಕ್ಕದಲ್ಲಿ ಆಂಜನೇಯನ ಮೂರ್ತಿಯು ಇದೆ. ಇದು ಗರ್ಭಗುಡಿಯು ಕಟ್ಟುವಾಗ ನೆಲದಲ್ಲಿ ಸಿಕ್ಕಿದೆ ಹಾಗಾಗಿ ಲಿಂಗದ ಪಕ್ಕದಲ್ಲಿ ಪ್ರತಿಷ್ಠಾಪನೆ ಮಾಡಿದ್ದೇವೆ ಎಂದು ತಿಳಿಸಿದರು. ಗರ್ಭಗ್ರವು ಚಿಕ್ಕದಾಗಿ ನೋಡಲು ಸುಂದರವಾಗಿ ಕಟ್ಟಿದ್ದಾರೆ. ಗರ್ಭಗ್ರಹದಲ್ಲಿ ಎಲ್ಲ ಜನರಿಗೆ ಪ್ರವೇಶವಿಲ್ಲ ಪೂಜಾರಿಯರು ಮತ್ತು ಮುಂದೆ ಎರಡು ಕಂಬದ ಅರ್ಚಕರು ನಿಲ್ಲುವ ಸ್ಥಳವನ್ನು ಮಾಡಿದ್ದಾರೆ. ಮುಂದೆ ದೊಡ್ಡದಾದ ಅಂಗಳವನ್ನು ಮಾಡಿದ್ದಾರೆ. ಗರ್ಭಗ್ರಹದ ಮುಂದೆ ಅಂಗಳದಲ್ಲಿ ಎರಡು ಲಿಂಗ ಮತ್ತು ಒಂದು ಬಸವಣ್ಣನ ಮೂರ್ತಿಯಿದೆ. ಈ ದೇವಸ್ಥಾನದಲ್ಲಿ ಪ್ರತಿದಿನ ಪೂಜೆಯನ್ನು ಮಾಡುತ್ತಾರೆ. ಶ್ರಾವಣ ಮಾಸದಂದು ಅಭಿಷೇಕಗಳು ಜರುಗುತ್ತವೆ. ಶ್ರಾವಣ ಮಾಸದ ಮಾರನೇ ಸೋಮವಾರದಂದು ಊರಿನಲ್ಲಿ ಖಾಂಡಾ ಹಾಕುತ್ತಾರೆ ಅಂದರೆ ಊರಿನ ಎಲ್ಲ ಜನರಿಗೆ ಊಟವನ್ನು ಕೊಡುತ್ತಾರೆ ಅವತ್ತಿನ ರಾತ್ರಿ ಊರಲ್ಲಿ ಪಲ್ಲಕ್ಕಿಯ ಮೆರವಣಿಗೆ ಮಾಡುತ್ತಾರೆ. ಮೆರವಣಿಗೆಯು ಮಾಡುವಾಗ ಊರಿನ ಹಿರಿಯರು ಪ್ರಮುಖ ಮುಖಂಡರು ಭಜನೆ ಮೇಳದವರು ಸೇರಿ ಭಜನೆಯನ್ನು ಮಾಡುತ್ತಾ, ಹಾಡುತ್ತಾ, ಕುಣಿಯುತ್ತಾ, ಮೆರವಣಿಗೆ ಮುಗಿಸುತ್ತಾರೆ. ಪಲ್ಲಕ್ಕಿಯು ಊರಲ್ಲಿ ಹೋಗುವಾಗ ಜನರು ಪಲ್ಲಕಿಗೆ ಕಾಯಿ, ಕರ್ಪೂರ ಮಾಡಿ ನಮಸ್ಕರಿಸಿ ಹೋಗುತ್ತಾರೆ. ಪಲ್ಲಕ್ಕಿಯ ಪಕ್ಕದಲ್ಲಿ ಅರ್ಚಕನು ತಪ್ಪದೆ ಇರುತ್ತಾನೆ. ಜನರು ನಮಸ್ಕರಿಸಸಲು ಬಂದವರಿಗೆ ಪ್ರಸಾದ ಹೂ ಕೊಡುತ್ತಾ ಮುಂದೆ ಸಾಗುತ್ತಾರೆ. ಈ ದೇವರಿಗೆ ಹರಕೆಯನ್ನು ಮಾಡುತ್ತಾರೆ ಅದನ್ನು ಅವರಿಗೆ ಆಗಿ ಬಂದಾಗ ತಮ್ಮ ಮನೆಯಲ್ಲಿ ಶುಭಕಾರ್ಯಗಳು ನಡೆಯುವಾಗ ತಮ್ಮ ಹರಕೆಯನ್ನು ಭಕ್ತಾದಿಗಳು ಈ ದೇವಸ್ಥಾನಕ್ಕೆ ಬಂದು ದರ್ಶನ ಪಡೆದುಕೊಂಡು ಹೋಗುತ್ತಾರೆ. ಈ ಊರಿಗೆ ಸೋಮಲಿಂಗದಹಳ್ಳಿ ಎಂಬ ಹೆಸರು ಬರಲು ಸೋಮೇಶ್ವರನಲಿಂಗವಿರುವುದಕ್ಕೆ ಎಂದು ಹೇಳಿದರು. ದೇವಸ್ಥಾನದ ಪಕ್ಕದಲ್ಲಿ ಒಂದು ಸುಂದರ ಬಾವಿಯಿದೆ ಈ ಬಾವಿಯಲ್ಲಿ ಯಾವತ್ತು ನೀರು ಇರುತ್ತವೆ. ಇಲ್ಲಿ ಬಾವಿಯ ಪಕ್ಕದಲ್ಲಿ ಹಾವಿನ ಹೆಡೆಯಿರುವ ನಾಲ್ಕು ಕಲ್ಲಿನ ಮೂರ್ತಿಗಳು ಒಂದು ಬಸವಣ್ಣನ ಮೂರ್ತಿ ಮೂರ ನಾಗಕನ್ನಿಕೆಯರು ಕುಳಿತಿರುವ ಸುಂದರ

ಮೂರ್ತಿಗಳಿವೆ ಮತ್ತು ಗಣಪನ ಮೂರ್ತಿ ಸಹ ಇಲ್ಲಿದೆ. ನಾಗರ ಪಂಚಮಿಯ ದಿನದಂದು ಊರಲ್ಲಿರುವ ಎಲ್ಲ ಜನರು ನಮಸ್ಕರಿಸಿ ನಂತರ ಸೋಮಲಿಂಗನಿಗೆ ನೈವೇದ್ಯವನ್ನು ನೀಡಿ ಸ್ವಲ್ಪ ಕಾಲ ಕುಳಿತು ಮನೆಗೆ ಹೋಗುತ್ತಾರೆ.

ಸೋಮ ಎಂಬ ಅರ್ಥವು ಚಂದ್ರ ಮತ್ತು ಸ್ವರ್ಗ ಎಂಬ ಅರ್ಥವನ್ನು ಕೊಡುತ್ತದೆ. ಅಂದರೆ ಹಲವಾರು ಯೋಧರು ವೀರಮರಣ ಹೊಂದಿ ಸ್ವರ್ಗ ಎಂಬ ನಾಮವನ್ನು ಬಿಟ್ಟು ಹೋಗಿದ್ದಾರೆ ಎಂಬ ಊಹೆಯು ಇಲ್ಲಿದೆ. ಇಲ್ಲಿ ಅಂದಿನ ಕಾಲದ ವೀರ ಯೋಧರ ಮರಣವಾದಾಗ ಅವರ ಪತ್ನಿಯರು ಸತಿಸಹಗಮನ ಪದ್ಧತಿ ಆಚರಣೆಯಲ್ಲಿ ಇರುವುದರಿಂದ ಸೋಮಲಿಂಗ ಎಂಬ ಹೆಸರು ಬಂದಿದೆ ಎಂದು ಸಹ ತಿಳಿಸಿದರು.

**ಅಡಿ ಟಿಪ್ಪಣಿಗಳು**

೧) ಗೋಗಿ ಹನುಮಾಕ್ಷಿ – ಕಲಬುರಗಿ ಜಿಲ್ಲೆಯ ಶಾಸನಗಳು ಪು.೧೨೭

೨) ಶಿವಾನಂದ ವಿ. ಹೈದ್ರಾಬಾದ ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು, ಪು.೧೪೫

೩) ಶಿವಾನಂದ ವಿ. ಹೈದ್ರಾಬಾದ ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು ಪು.೧೪೬

೪) ಎಸ್.ಆರ್.ತಡಕಲ್ ಗುಲ್ಬರ್ಗಾ ಜಿಲ್ಲೆಯ ವೀರಶೈವ ಸಾಂಸ್ಕೃತಿಕ ಕೇಂದ್ರಗಳು ಪ್ರಕಟಣೆ ೨೦೦೬ ಪುಟ.೧೨೩

೫) ಶಿವಾನಂದ ವಿ. ಹೈದ್ರಾಬಾದ ಕರ್ನಾಟಕದ ಭಾಗದ ಕನ್ನಡ ಶಿಲಾ ಶಾಸನಗಳು, ಪು. ೧೪೬.

೬) ಭಾರತದ ಗುಲಬರ್ಗಾ ಜಿಲ್ಲೆಯ ಗೇಜಿಟೇರಿಯನ್, ಪು–೭೫೭

೭) ಅದೇ, ಪು–೭೨೬

# ಅಧ್ಯಾಯ - ೫

## ಉಪಸಂಹಾರ

ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಅಲ್ಲಿ ಬದುಕಿದ ಜನ, ಹೀಗೆ ಬದುಕಿನ ಜನಾಂಗದ ಒಂದು ಗಣನೀಯವಾದ ಭಾಗ ಆ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ, ಜನತೆ ಬದುಕಿನ ರೀತಿ ಅನುಸರಿಸಿದ ಧರ್ಮ ಕಟ್ಟಿ ಕಲೆ, ಅವರ ಜೀವನ ಸಮಸ್ಯೆಗಳು ಅವರ ಜೀವನ ಮೌಲ್ಯಗಳು ಇತ್ಯಾದಿಗ ವಿವರಣೆಯೇ ಆ ದೇಶದ ಇತಿಹಾಸವಾಗಿದೆ.

ಒಂದು ನಾಡಿನ ಇತಿಹಾಸ ಎಂದರೆ ಆ ನಾಡನ್ನು ಕಾಲದಿಂದ ಕಾಲಕ್ಕೆ ಆಳಿದ ರಾಜರ ಇತಿಹಾಸವೆಂಬ ಭಾವನೆ ಪ್ರಧಾನವಾಗಿದ್ದು ಗ್ರಂಥದ ಕೊನೆಯಲ್ಲಿ ಆ ನಾಡಿನ ಕಲೆ, ಧರ್ಮ, ಇತ್ಯಾದಿಗಳನ್ನು ಕುರಿತು ನಿರೂಪಿಸುವ ಒಂಡೆರಡು ಅಧ್ಯಾಯನಗಳು ಬಂದಿವೆ ನನ್ನ ಬರಹದಲ್ಲಿ.

ಚಿಂಚೋಳಿ ತಾಲ್ಲೂಕ ಪ್ರಾಚೀನ ಐತಿಹಾಸಿಕ ಸ್ಥಳಗಳಲ್ಲಿ ಒಂದಾಗಿದೆ. ಅದರಲ್ಲಿ ಬೆರೆತಿರುವುದು ಸಾಂಸ್ಕೃತಿಕ ಚಟುವಟಿಕೆಯು ಒಂದಾಗಿದೆ. ಜಾತ್ರೆ ದಿನಗಳಲ್ಲಿ ಹಬ್ಬ ಹರಿದಿನದಂದು ಇನ್ನು ಹೆಚ್ಚು ಸಂಭ್ರಮವಿರುವುದು ನಾವು ಕಾಣಬಹುದು. ಪುಣ್ಯ ಕ್ಷೇತ್ರ ಕಲೆಯ ಬೀಡು ಅತ್ಯಂತ ನಾಗರೀಕತೆಯ ಹಾಗೂ ಸಾಂಸ್ಕೃತಿಕ ತಳಹದಿಯ ಮೇಲೆ ನಿರ್ಮಾಣಗೊಂಡ ಈ ಪ್ರದೇಶಕ್ಕೆ ಐತಿಹಾಸಿಕ ಹಿನ್ನಲೆಯು ಸಹ ಇದೆ. ಧಾರ್ಮಿಕ, ಸಾಂಸ್ಕೃತಿಕ ಪರಂಪರೆ ಇದೆ. ಸಂದುಹೋದರೂ ಇಂದಿಗೂ ಆಕರ್ಷಕವಾದಂತೆ ಚಿಂಚೋಳಿ ಪ್ರದೇಶವು ಜನರನ್ನು ಕೈಮಾಡಿ ಕರೆಯುತ್ತದೆ. ಚಿಂಚೋಳಿ ತಾಲ್ಲೂಕಿನ ಮನಸ್ಸಿನ ದಾಹ ಹಿಂಗುವುದೇ ಇಲ್ಲ, ಆಕಾಶವನ್ನೇ ಚುಂಬಿಸುವಂತಹ ಎತ್ತರದ ಗೋಪುರವನ್ನು ಹೊಂದಿದ್ದು ಸುಂದರವಾದ ನೈಸರ್ಗಿಕ ತಾಣವಾಗಿದೆ. ಸಾವಿರಾರು ವರ್ಷಗಳಿಂದ ತಾಲ್ಲೂಕ ಕೇಂದ್ರವಾದ ಚಿಂಚೋಳಿಯ ಸಂದರ್ಶಿಸಿದ ಸಾವಿರಾರು ಜನರು ಸಂಶೋಧಕರು, ಹೃದಯಗಳು, ಕವಿಗಳು, ಧಾರ್ಮಿಕ ಪುರುಷರು ಮಡಿಯನ್ನಲ್ಲದೇ ಇನ್ನೊನೂ ಕಾಣದೇ ಭಗ್ನ ಹೃದಯಗಳಾಗಿ ಹಿಂದಿರುಗುತ್ತಿದ್ದಾರೆ.

ಚಿಂಚೋಳಿ ಪ್ರದೇಶವು ಪ್ರಗೈತಿಹಾಸಿಕ ಕಾಲದಿಂದಲೂ ತನ್ನ ಪ್ರಮುಖ್ಯತೆ ಪಡೆದುಕೊಂಡಿದೆ. ಇತಿಹಾಸ ಕಾಲಕ್ಕೆ ಬಂದಾಗ ಪ್ರಾರಂಭಿಕ ಅರಸು ಮನೆತನಗಳು ಅವರ ಸಾಂಸ್ಕೃತಿಕ ಚಟುವಟಿಕೆಗಳು, ಶಾಲಾ ಅಭ್ಯಾಸ, ಮನೆತನಗಳು ಚರಿತ್ರೆಯನ್ನು ಹೇಳುವ ಶಾಸನಗಳು ಅಳಿದುಳಿದ ಸ್ಮಾರಕಗಳು, ವೀರಗಲ್ಲುಗಳು ಪುನ ವಿಮರ್ಶಿಸಿ ಮರು ಅಧ್ಯಾಯನ ಮಾಡುವುದು ಜೊತೆಗೆ ಕರ್ನಾಟಕದ ಸಂಸ್ಕೃತಿಯ ಅಭಿವೃದ್ಧಿಗೆ ಅರಸರು ಹಿಂದಾದ ಕೊಡುಗೆಗಳು ನೀಡಿದ್ದಾರೆ. ಈ ನಿಟ್ಟಿನಲ್ಲಿ ಇಲ್ಲಿನ ಸಂಸ್ಕೃತಿಕ ಮತ್ತು ಚಿತ್ರಕಲೆಗೆ ಮಹತ್ವದ ಕೊಡುಗೆ ನೀಡಿದ್ದಾರೆ. ಅದು ಬಹಳ ಅಮಲ್ಯವಾದ ಸಂಪತ್ತು ಈ ಅಮೂಲ್ಯ ಸಂಪತ್ತನ್ನು ತಿಳಿಯುವವರು ಮತ್ತು ತಿಳಿಸುವುದು ಪ್ರಸ್ತುತ ಸಮಯದಲ್ಲಿ ತೀರ ಅಗತ್ಯ ಮತ್ತು ಅವಶ್ಯಕವಾಗಿದೆ.

ಈಗಾಗಲಲೆ ಬೆಳಕಿಗೆ ತಂದಿರುವ ಸಂಗತಿಗಳನ್ನು ಚರ್ಚಿಸುವ ಜೊತೆಗೆ ಬೆಳಕಿಗೆ ಬಂದಿರುವ ಅಲಕ್ಷಕ್ಕೆ ಗುರಿಯಾಗಿರುವ ವಿಷಯಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಇಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

೧) ನಮ್ಮ ಸ್ಥಳಿಯ ಇತಿಹಾಸದ ಬಗ್ಗೆ ಅಭಿಮಾನ ಮೂಡಿಸುವುದು.

೨) ಅವರು ರೂಪಿಸಿದ ಮತ್ತು ರೂಢಿಯಲ್ಲಿ ತಂದ ಸಂಸ್ಕೃತಿ ಮತ್ತು ಪರಂಪರೆಯನ್ನು ಉಳಿಸಿ ಬೆಳೆಸುವುದು.

೩) ಚಿಂಚೋಳಿ ತಾಲ್ಲೂಕಿನ ಮಹತ್ವದ ಬಗ್ಗೆ ತಿಳಿಸಿ ನಮ್ಮ ಯುವಕರಲ್ಲಿ ಸ್ಫೂರ್ತಿ, ಚೈತನ್ಯ ಮೂಡಿಸುವುದು ಒಂದು ಕರ್ತವ್ಯವಾಗಿದೆ.

೪) ಯುವಕರಲ್ಲಿ ನಮ್ಮ ದೇಶದ ಐತಿಹಾಸಿಕ ಸಂಪತ್ತುಗಳಾದ ಶಾಸನಗಳು, ದೇವಾಲಯಗಳು ಸ್ಮಾರಕಗಳು, ವೀರಗಲ್ಲು ಬಗ್ಗೆ ಇನ್ನಷ್ಟು ಜಾಗೃತಿಗೊಳಿಸುವುದು.

ವಿಜ್ಞಾನೇಶ್ವರ ಪ್ರಕಾರ "ಪ್ರಪಂಚದಲ್ಲಿ ಕಲ್ಯಾಣದಂತಹ ನಗರವು ಹಿಂದೆಯಾಗಲಿ ಮುಂದೆಯಾಗಲಿ ಇರಲಾರದು, ವಿಕ್ರಮಾದಿನಂತಹ ರಾಜನನ್ನು ಕಂಡಿಲ್ಲ ಮತ್ತು ಕೇಳಿಲ್ಲ" ಎಂದು ಹೆಳಿದರು. ಹಾಗೆಯೇ ನಮ್ಮ ತಾಲೂಕನ ವೈಭವ ಇಂತಹ ಕಲ್ಯಾಣದ ಚಾಳುಕ್ಯರ ಕಾಲಾವಧಿಯಲ್ಲಿ ಚಿಂಚೋಳಿ ಪ್ರದೇಶವು ವೈಭವದ ಮೇಲೆ ವೈಭವವನ್ನು ಕಂಡಿತ್ತು. ಚಿಂಚೋಳಿಯು ಅನೇಕ ದೇವಾಲಯಗಳು ಭಕ್ತರಿಗೆ ಆಕರ್ಷಕವೆನಿಸಿವೆ. ಉದಾ: ಸುಲೇಪೇಟಿನ ವೀರಭದ್ರ ದೇವಾಲಯ ಸುಕ್ಷೇತ್ರ ಬುಗ್ಗಿ, ದೇಗಲಮಡಿಯು ಸಂಗಮೇಶ್ವರ ದೇವಾಲಯ, ಈ ದೇವಾಲಯದಲ್ಲಿ ಜೋಡಿ ಲಿಂಗಗಳು ಇಂದಿಗೂ ಭಕ್ತರನ್ನು ಅಚ್ಚರಿಗೊಳಿಸುತ್ತಿವೆ.

ಚಿಂಚೋಳಿಯ ತಾಲೂಕಿನ ಎಲ್ಲಾ ದೇವಾಲಯಗಳ ಪಾಲನೆ ಪೋಷಣೆ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಭಕ್ತಾದಿಗಳು ಹೇರಳವಾಗಿ ದತ್ತಿ ದಾನಗಳನ್ನು ಬಿಟ್ಟಿದ್ದರೆಂದು ತಿಳಿದು ಬರುತ್ತದೆ. ಅಲ್ಲದೇ ಇಂದಿಗೂ ಕೆಲವು ದೇವಾಲಯಗಳನ್ನು ಜೀರ್ಣೋದ್ಧಾರ ಗೊಳಿಸಲಾಗುತ್ತಿದೆ.

ಇಂತಹ ಅಪರೂಪಕ ನಾಡಿನಲ್ಲಿ ನಾವು ಬೆಳೆದು ಬಾಳುತ್ತಿರುವುದು ಹೆಮ್ಮೆಯ ವಿಷಯವಾಗಿದೆ. ಚಿಂಚೋಳಿಯು ಸುಂದರ ನೆಲೆಯ ನಾಡಾಗಿ ಇಂದು ಎಲ್ಲರ ಗಮನ ಸೆಳೆಯುವಂತೆ ಮಾಡುತ್ತಿದೆ.

## ಆಕರಗ್ರಂಥಗಳು


೧) ಪಾಟೀಲ ಎಮ್.ಬಿ. ಸಂಪಾದಕರು – ಗುಲಬರ್ಗಾ ಜಿಲ್ಲಾ ಗೆಜೆಟಿಯಿರ್ ಕರ್ನಾಟಕ ಸರಕಾರ ಬೆಂಗಳೂರು, ೧೯೯೭

೨) ಪಂಚಮುಖಿ ಆರ್. ಎಸ್. – ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ, ಧಾರವಾಡ–೧೯೬೭.

೩) ರಾಮೇಶ್ವರ ಎ.ಕೆ. – ಚಿಂಚೋಳಿ ತಾಲೂಕ ದರ್ಶನ ಐಬಿಎಚ್, ೧೯೮೬.

೪) ಬಸವರಾಜ ಸಬರದ – ಗುಲಗಬರ್ಾ ಜಿಲ್ಲೆಯ ಅನುಭಾವಿ ಕಂದಿಗಳು, ಹಂಪೆ–೧೯೪೫

೫) ವೀರಭದ್ರ ಸಿಂಪಿ (ಸಂ) – ಕಲಬುರಗಿ ಜಿಲ್ಲೆ ಇತಿಹಾಸ ಮತ್ತು ಸಂಸ್ಕೃತಿಕ ಪರಂಪರೆ ಕನ್ನಡ ಸಾಹಿತ್ಯ ಪರಿಷತ್. ಮುದ್ರಣ ೨೦೧೬ ಸಮ್ಮೇಳನದ ಸ್ಮರಣ ಸಂಚಿಕೆ.

೬) ಜಗನ್ನಾಥ ಶೇರಿಕಾರ – ಪ್ರಜಾವಾಣಿ ರಿಪೋಟರ್ ಚಿಂಚೋಳಿ ತಾಲ್ಲೂಕ

೭) ಶಿವರುದ್ರಪ್ಪ ಜಿ.ಎಸ್ – ಸಮಗ್ರ ಗದ್ಯ – ೨. ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ೧೯೯೮

೮) ಸೂರ್ಯನಾಥ ಕಾಮತ್ (ಸಂ) – ಕರ್ನಾಟಕ ರಾಜ್ಯ ಗೇಜಿಟಿಯರ್ ಭಾಗ–೧ ಬೆಂಗಳೂರು ೧೯೪೫

೯) ಸೂರ್ಯನಾಥ ಕಾಮತ್ (ಸಂ) – ಧಾರವಾಡ ಜಿಲ್ಲಾ ಗೇಜಿಟಿಯರ್ ಬೆಂಗಳೂರು ೧೯೯೫

೧೦) ರೆವುಡು ನರಂಸಿಂಹ ಶಾಸ್ತ್ರೀ – ಕರ್ನಾಟಕದ ಸಂಸ್ಕೃತಿ ಶಾರದ ಪ್ರಕಾಶನ ಬೆಂಗಳೂರು ೧೯೮೮

೧೧) ವನದುರ್ಗ ರಂಗರಾಜು – ಶಹಾಪುರ ತಾಲೂಕಿನ ಶಾಸನಗಳ ಒಂದು ಸಮೀಕ್ಷೆ ಶಹಾಪುರ ೧೯೬೭

# II. ಛಾಯಚಿತ್ರಗಳು



ಸಂಗಮೇಶ್ವರ ದೇವಸ್ಥಾನ ದೇಗುಲಮಡಿ



ಸಂಗಮೇಶ್ವರ ದೇವಸ್ಥಾನದಲ್ಲಿನ ಜೋಡಿಲಿಂಗ



ವೀರಭದ್ರೇಶ್ವರ ದೇವಸ್ಥಾನದ ಮಹಾದ್ವಾರ (ಶಂಭುಲಿಂಗ) ಸುಲೇಪೇಟ



ಗರ್ಭಗುಡಿಯಲ್ಲಿರುವ ವೀರಭದ್ರೇಶ್ವರನ ವಿಗ್ರಹ



ರಾಮಲಿಂಗೇಶ್ವರ ದೇವಸ್ಥಾನ ಮೋಘ




ರಾಮಲಿಂಗೇಶ್ವರ ದೇವಸ್ಥಾನದಲ್ಲಿರುವ ಲಿಂಗ




ಪಾಂಡುರಂಗ ದೇವಸ್ಥಾನ ಹಲಕೂಡಾ




ಗರ್ಭಗುಡಿಯಲ್ಲಿರುವ ಪಾಂಡುರಂಗ ಮತ್ತು ರುಕ್ಮೀಣಿಯ ವಿಗ್ರಹ



ಪಾಪನಾಶ ದೇವಸ್ಥಾನ ಮಿರಿಯಾಣ



ಪಾಪನಾಶ ದೇವಸ್ಥಾನದಲ್ಲಿರುವ ಶಿವಲಿಂಗನ ಮೂರ್ತಿ



ಸೋಮೇಶ್ವರ ದೇವಾಸ್ಥಾನ ಚೆಂಗಟಾ



ಸೋಮೇಶ್ವರ ದೇವಾಸ್ಥಾನದಲ್ಲಿರುವ ಲಿಂಗ



ಮಲ್ಲಿಕಾರ್ಜುನ ದೇವಸ್ಥಾನ ಕುಪನೂರ



ಜಾತ್ರೆಯಲ್ಲಿ ಭಾಗವಹಿಸಿದ ಜನಸ್ತೋಮ



ಗೊಟ್ಟಂಗೊಟ್ಟ ಬಕ್ಕಪ್ರಭು ದೇವಸ್ಥಾನ



ಶ್ರೀ ಕೊರವಂಜೇಶ್ವರಿ ದೇವಸ್ಥಾನ ಕೊರವಿ



ಕೊರವಿ ಬಾವಿ



ಬಾವಿ ಮತ್ತು ಬಾವಿಯಲ್ಲಿರುವ ಕೊರವಂಜೇಶ್ವರಿ ದೇವಿ

